ಉಪನ್ಯಾಸ ಗ್ರಂಥಮಾಲೆ

೪೪

# ಜಾನಪದ ಕಥೆಗಳು

ಎಲ್. ಆರ್. ಹೆಗಡೆ ಎಂ. ಎ.




ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ

ಮೇ, ೧೯೬೪

## ಉಪನ್ಯಾಸ ಗ್ರಂಥಮಾಲೆ

೧. ಭವಭೂತಿ (ದ್ವಿತೀಯ ಆವೃತ್ತಿ) –ಕೆ. ಕೃಷ್ಣಮೂರ್ತಿ
೨. ಮನೋರೋಗಗಳು ( ,, ) –ಎನ್. ಆರ್. ಕುಲಕರ್ಣಿ
೩. ಪ್ರಥಮ ಪಂಚವಾರ್ಷಿಕ ಯೋಜನೆ
ಹಾಗೂ ಒಕ್ಕಲುತನ –ಎನ್. ಪಿ. ಪಾಟೀಲ
೪. ಗಾದೆಗಳು (ತೃತೀಯ ಆವೃತ್ತಿ) –ಎ. ಕೆ. ರಾಮಾನುಜನ್
೫. ಭಾರತದಲ್ಲಿ ಜಾತಿ ಪದ್ಧತಿ (ದ್ವಿ. ಆ.)–ವ್ಹಿ. ಎಸ್. ಡಿ'ಸೋಜಾ
೬. ಕೀಟಕ ಪಿಡುಗುಗಳ ಸಮೀಕ್ಷಣೆ (ದ್ವಿ. ಆ.)
–ಎಸ್. ಎಸ್. ಕಟಗಿಹಳ್ಳಿಮಠ
೭. ರಾಜಕೀಯ ಪಕ್ಷಗಳು (ದ್ವಿ. ಆ.)–ಎನ್. ರಾಜಗೋಪಾಲರಾವ್
೮. ಸ್ವಾದಿ ಅರಸುಮನೆತನ ( ,, )–ಎಸ್. ಎಸ್. ಮಾಳವಾಡ
೯. ಮಕ್ಕಳ ಶಿಕ್ಷಣ (ತೃ. ಆ.) –ಡಿ. ಎಸ್. ಕರ್ಕಿ
೧೦. ಮೂಢ ನಂಬಿಕೆಗಳು ( ,, ) –ಎಲ್. ಆರ್. ಹೆಗಡೆ
೧೧. ಸಂಸ್ಕೃತ ಕವಯಿತ್ರಿಯರು (ದ್ವಿ. ಆ.)–ಕೆ. ಟಿ. ಪಾಂಡುರಂಗಿ
೧೨. ನಿತ್ಯಜೀವನದಲ್ಲಿ ರಸಾಯನಶಾಸ್ತ್ರ (,,) –ಬಿ. ವಿರೂಪಾಕ್ಷಪ್ಪ
೧೩. ಸಾರ್ವಜನಿಕ ಆಡಳಿತ (ದ್ವಿ. ಆ.) –ಜಿ. ಎಸ್. ಹಾಲಪ್ಪ
೧೪. ವಿಚಾರವಾದ ( ,, ) –ಗೌರೀಶ ಕೈಕಿಣಿ
೧೫. ಮಹಾಕವಿ ಮಿಲ್ಟನ್ ( ,, ) –ಜಿ. ಎಸ್. ಆಮೂರ
೧೬. ಭಾರತದಲ್ಲಿ ಗ್ರಂಥಾಲಯ ಪ್ರಸಾರ (,,)–ಕೆ. ಎಸ್. ದೇಶಪಾಂಡೆ
೧೭. ಭಾರತೀಯ ನಾಗರಿಕತೆಗೆ ಮನುವಿನ
ಕೊಡುಗೆ (ದ್ವಿ. ಆ.) –ಬಿ. ಎಚ್. ಶ್ರೀಧರ
೧೮. ಜನಸಂಖ್ಯೆ ಹಾಗು ಆಹಾರ ಸಮಸ್ಯೆ
–ಪಿ. ಎಂ. ಉಮಾಕಾಂತಶಾಸ್ತ್ರಿ
೧೯. ಸೌರವ್ಯೂಹ –ಸಿ. ಎನ್. ಶ್ರೀನಿವಾಸ ಅಯ್ಯಂಗಾರ
೨೦. ಪ್ರಾಚೀನ ಭಾರತದಲ್ಲಿ ಸಾಮಾಜಿಕ ಜನಜೀವನ (ದ್ವಿ. ಆ.)
–ಸಿ. ವ್ಹಿ. ರಂಗಸ್ವಾಮಿ
೨೧. ಸಮಾಜ ಕಾರ್ಯ (ದ್ವಿ. ಆ.)–ಎಚ್. ಎಂ. ಮರುಳಸಿದ್ಧಯ್ಯ
೨೨. ಸಂಸತ್ತಿನ ಕಾರ್ಯಪದ್ಧತಿ (,,)–ಎ. ಎಂ. ರಾಜಶೇಖರಯ್ಯ
೨೩. ಕನ್ನಡನಾಡಿನ ಶಾಸನಗಳು (ದ್ವಿ. ಆ.) –ಪಿ. ಬಿ. ದೇಸಾಯಿ
೨೪. ಕವೀಂದ್ರ ರವೀಂದ್ರರು ( ,, ) –ಎಸ್. ಎಸ್. ಮಾಳವಾಡ
೨೫. ನಾಗಾನಂದ ( ,, ) –ಎಚ್. ಪಿ. ಮಲ್ಲೇದೇವರು

ಉಪನ್ಯಾಸ ಗ್ರಂಥಮಾಲೆ

೪೪

# ಜಾನಪದ ಕಥೆಗಳು

ಎಲ್. ಆರ್. ಹೆಗಡೆ ಎಂ. ಎ.




ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ

ಮೇ, ೧೯೬೮

ಪ್ರಕಾಶಕರು :

ಎಸ್. ಎಸ್. ಒಡೆಯರ, ಎಂ.ಎ., ಎಲ್‌ಎಲ್. ಬಿ.

ರಜಿಸ್ಟ್ರಾರ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಪ್ರಥಮ ಮುದ್ರಣ, ೧೯೬೫
೨,೦೦೦ ಪ್ರತಿಗಳು

ದ್ವಿತೀಯ ಮುದ್ರಣ, ೧೯೬೭
೪,೦೦೦ ಪ್ರತಿಗಳು

ಬೆಲೆ : ೨೫ ಪೈಸೆ

ಮುದ್ರಕರು :

ಸಂಗಮ ಮುದ್ರಣಾಲಯ

ಸಾಧನಕೇರಿ, ಧಾರವಾಡ-೧

# ಮುನ್ನುಡಿ

ನಮ್ಮ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ವಿಭಾಗವು ಗ್ರಾಮಾಂತರ ಪ್ರದೇಶಗಳಲ್ಲಿ ಪ್ರತಿ ತಿಂಗಳು ಏರ್ಪಡಿಸುತ್ತಿರುವ ಉಪನ್ಯಾಸ ಶಿಬಿರಗಳು ದಿನೇ ದಿನೇ ಜನಪ್ರಿಯವಾಗುತ್ತ ಸಾಗಿರುವುದು ನಿಜವಾಗಿಯೂ ಸಂತೋಷದ ಸಂಗತಿ. ಈ ಜ್ಞಾನಪ್ರಸಾರದ ಕಾರ್ಯದಲ್ಲಿ ಭಾಗವಹಿಸುವುದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕವೊದಗುವುದಲ್ಲದೆ ಎಂಥ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭವಾದ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೆ ಎಪ್ಪತ್ಮೂರು ಪುಸ್ತಕಗಳು ಪ್ರಕಟವಾಗಿವೆ. ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ಎರಡು-ಮೂರು ಮುದ್ರಣಗಳನ್ನೂ ಕಂಡಿ

ರುವುದು ಈ ಮಾಲೆಯ ಉಪಯುಕ್ತತೆಯನ್ನೂ ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಧನ ಸಹಾಯ ಆಯೋಗದವರು ಉಪನ್ಯಾಸ ಶಿಬಿರಗಳಿಗೂ, ಈ ಪುಸ್ತಿಕೆಗಳ ಪ್ರಕಟನೆಗೂ ನೆರವು ನೀಡುತ್ತಿದ್ದು ಅವರಿಗೆ ವಿಶ್ವವಿದ್ಯಾಲಯವು ತನ್ನ ಕೃತಜ್ಞತೆಗಳನ್ನು ಸೂಚಿಸುತ್ತದೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖವಾದ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಎ. ಎಸ್. ಅಡಕೆ
ಉಪಕುಲಪತಿ
ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ
೧೫–೫–೧೯೬೮

# ಅರಿಕೆ

ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ಉಪನ್ಯಾಸ ಕಾರ್ಯಕ್ರಮದ ಅಂಗವಾಗಿ ಬೆಳಗಾವಿ ಜಿಲ್ಲೆಯ ಭೋಜ ಗ್ರಾಮದಲ್ಲಿ ೧೯೬೫ ನೇ ಇಸವಿಯ ಎಪ್ರಿಲ ಇಪ್ಪತ್ತಾರನೆಯ ದಿನಾಂಕ ಜರುಗಿದ ೮೬ ನೆಯ ಶಿಬಿರದಲ್ಲಿ "ಜಾನಪದ ಕಥೆಗಳು" ಎಂಬ ವಿಷಯದ ಮೇಲೆ ಮಾಡಿದ ಭಾಷಣವು ಈಗ ಪುಸ್ತಕರೂಪದಲ್ಲಿ ಪ್ರಕಟವಾಗುತ್ತಿದೆ.

"ಜಾನಪದ ಕಥೆಗಳು" ಎಂಬ ವಿಷಯವು ಬಹುದೊಡ್ಡ ಮಹಾಸಾಗರದಂತಹುದು. "ಕೊಡದೊಳಗೆಷ್ಟು ನಿಲ್ವುದು ಸಮುದ್ರಜಲಂ, ವರಕಾಂಚನಾದ್ರಿ ಕನ್ನಡಿಯೊಳಗೆಷ್ಟು ತೋರ್ಪುದು ?" ಎಂದು ಅಪರಾಜಿತೇಶ್ವರ ಶತಕದಲ್ಲಿ ರತ್ನಾಕರ ವರ್ಣಿಯು ಕೇಳಿದ್ದಾನೆ. ಆ ವಿಷಯವನ್ನು ಒಂದು ಅಭ್ಯಾಸದ ಅಳವಿನಲ್ಲಿ ಹಿಡಿದಿಡುವ ಪ್ರಯತ್ನವಿದು. ಕಾಳಿದಾಸನು ರಘುವಂಶದಲ್ಲಿ ಹೇಳಿದಂತೆ "ತಿತೀರ್ಷುರ್ದುಸ್ತರಂ ಮೊಹಾ-ದುಡುಪೇನಾಸ್ಮಿ ಸಾಗರಂ''

ಧಾರಾನಗರದ ಭೋಜಮಹಾರಾಜನು ಕವಿಗಳನ್ನು ಸತ್ಕರಿಸಿ ಅಕ್ಷರಕ್ಕೆ ಲಕ್ಷವನ್ನು ಕೊಟ್ಟಂತೆ ಧಾರಾಳವಾದ ಮನಸ್ಸಿನಿಂದ ಭೋಜಗ್ರಾಮದ ಮಹಾಜನರು ಅಕ್ಷರ ಅಕ್ಷರಕ್ಕೂ ಲಕ್ಷ್ಯಕೊಟ್ಟು ಕೇಳಿ ಭಾಷಣಕಾರರಿಗೆ ಪ್ರೋತ್ಸಾಹ ಕೊಟ್ಟಿರುತ್ತಾರೆ.

ಈ ಉಪನ್ಯಾಸವನ್ನು ಏರ್ಪಡಿಸಿ ಅದನ್ನು ಈಗ ಪುಸ್ತಕ ರೂಪದಲ್ಲಿ ಪ್ರಕಟಿಸುತ್ತಿರುವ ಕರ್ನಾಟಕ ವಿಶ್ವವಿದ್ಯಾಲಯದ

ಳೆಯು ಅಷ್ಟು ಪ್ರಿಯವಲ್ಲದಿದ್ದರೂ, ಬೀರಬಲ್ಲನ ಅನುಭವದಂತೆ ಅವರನ್ನು ಸಮಾಧಾನ ಮಾಡುವ ಕೆಲಸವು ಬಹಳ ಪೇಚಿನದಾಗಿದ್ದರೂ ಅಜ್ಜಿಯರ ಹಾಗೆ ಮಕ್ಕಳನ್ನು ರಂಜಿಸಿ ಸುಮ್ಮನಾಗಿಸುವ ತಾಳ್ಮೆ ಮತ್ತಾರಲ್ಲೂ ಇರುವದಿಲ್ಲ. ಮಕ್ಕಳಿಗೂ ಕೂಡ ಹೊಡೆಯುವ ಮನಸ್ಸಿಲ್ಲದ, ತಮ್ಮನ್ನು ಹೊಡೆಯಲೂ ಓಡಿ ಬರಲಾರದ ಅಜ್ಜಿಯರೆಂದರೆ ಬಹು ಪ್ರೇಮ. ಮಕ್ಕಳನ್ನಾಡಿಸಿ ಅಜ್ಜಿಗೆ ಹೊತ್ತು ಕಳೆಯುತ್ತದೆ. ಅಜ್ಜಿಯ ಕತೆ ಕೇಳಿ ಮಕ್ಕಳ ಬೇಸರ ಪರಿಹಾರವಾಗುತ್ತದೆ. ಅದರಿಂದಲೇ ಸರ್ವಜ್ಞನು 'ಮನೆಗೊಬ್ಬ ಅಜ್ಜಿಯೇ ಲೇಸು' ಎಂದು ಹೇಳಿರಬೇಕು.

ಹೀಗೆ ಪ್ರಾಣಿಸಂಬಂಧವಾದ ಹಾಗು ಇತರ ಕಾಲ್ಪನಿಕವಾದ ಅನೇಕ ಕಥೆಗಳಿಗೆ ಅಜ್ಜಿಯರು ತಮ್ಮ ಮುದಿ ವಯಸ್ಸಿನಲ್ಲಿ ಜನ್ಮಕೊಡುತ್ತಾರೆ. ಅಂಥ ಅಡುಗೂಲಜ್ಜಿಯರ ಕಥೆಗಳು ನಮ್ಮ ನಾಡಿನಲ್ಲಿಯೂ ಜಗತ್ತಿನ ಇತರ ಎಲ್ಲ ಭಾಗಗಳಲ್ಲಿಯೂ ಸೃಷ್ಟಿಗೊಳ್ಳುತ್ತವೆ, ಅಳಿಯುತ್ತವೆ, ಮತ್ತೆ ಅಗತ್ಯಕ್ಕೆ ತಕ್ಕಂತೆ ಸೃಷ್ಟಿಯಾಗುತ್ತವೆ. ಸಂಸಾರವು ನೀರ ಮೇಲಣ ಗುಳ್ಳೆ ಎಂದು ಪುರಂದರದಾಸರು ಹೇಳುವದು ಎಷ್ಟು ಮಟ್ಟಿಗೆ ನಿಜವೋ ಪರಮಾತ್ಮನೇ ಬಲ್ಲ! "ನೀರ ಮೇಲಣ ಗುಳ್ಳೆ ನಿಜವಲ್ಲ ಹರಿಯೇ" ಎಂಬ ಮಾತು ಈ ರೀತಿ ಮೂಡಿ ಮಾಯವಾದ ಬಹುಸಂಖ್ಯೆಯ ಕಥೆಗಳ ವಿಷಯದಲ್ಲಿ ಮಾತ್ರ ನಿಜ. ಅದು ಎರಡು ಅರ್ಥಗಳಲ್ಲಿಯೂ ನಿಜ. ನೀರ ಮೇಲಣ ಗುಳ್ಳೆಯಂತೆ ಸಂಸಾರ ಪ್ರವಾಹದಲ್ಲಿ ಹುಟ್ಟಿ ಹುಟ್ಟಿ ಅಳಿಯುತ್ತವೆ. ಎರಡನೆಯ ಅರ್ಥದಲ್ಲಿ ಇವು ನೀರ ಮೇಲಣ ಗುಳ್ಳೆಯ ಹಾಗೆ ನಿಜವಲ್ಲದ ಕಾಲ್ಪನಿಕ ಕಥೆಗಳು. ವಾಸ್ತವಿಕವಲ್ಲದ ಅನೇಕ ಘಟನೆ

ಗಳು ಈ ಕಥೆಗಳಲ್ಲಿ ಬರುತ್ತವೆ. ಕಾಗೆಗಳು, ಗುಬ್ಬಿಗಳು ಇತರ ಪ್ರಾಣಿಗಳು ಮನುಷ್ಯರಂತೆಯೇ ಮಾತನಾಡುತ್ತವೆ. ರಾಕ್ಷಸರು, ಯಕ್ಷಿಣಿಯರು, ಭೂತಗಳು, ಪ್ರೇತಗಳು, ದೇವತೆಗಳು ಈ ಕಥೆಗಳಲ್ಲಿ ಬಂದು ಪಾತ್ರವಾಡಿ ಹೋಗುತ್ತವೆ. ಮನುಷ್ಯರು ಪ್ರಾಣಿಗಳಾಗಿ ಪರಿವರ್ತನ ಹೊಂದಬಹುದು. ಈ ಕಥೆಗಳ ಅಸಂಭವನೀಯ ಜಗತ್ತಿನಲ್ಲಿ ಅಸಂಭವವೆಂಬುದೇ ಇಲ್ಲವಾಗಿದೆ.

ಆದರೆ ಈ ಕಥೆಗಳ ಸಂಸಾರದಲ್ಲಿಯೂ ಚಿರಂಜೀವಿಗಳುಂಟು! ಈ ಕಥೆಗಳಲ್ಲಿ ಸ್ವಾರಸ್ಯವಾದವುಗಳು, ವಿಶಿಷ್ಟ ಕಲ್ಪನಾಚಮತ್ಕಾರವುಳ್ಳವುಗಳು, ಲಹರಿಯ ಕಥೆಗಳು ಕರ್ಣಾಕರ್ಣಿಕೆಯಾಗಿ ಬಾಯಿಯಿಂದ ಕಿವಿಗೆ, ಕಿವಿಯಿಂದ ಬಾಯಿಗೆ ಸಂಚಾರಮಾಡುತ್ತ, ಜನರ ಹೃದಯಗಳಲ್ಲಿ ಅಮರತ್ವವನ್ನು ಪಡೆಯಲು ಹವಣಿಸುತ್ತ ತಿರುಗುತ್ತಿರುತ್ತವೆ. ಇಂಥ ಎಷ್ಟೋ ಹಾಳಿಹಡಗಗಳು ಚಿರಂತನದ ಬಂದರವನ್ನು ಅರಸುತ್ತ ಸಂಸಾರ ಸಮುದ್ರದ ಮೇಲೆ ಸಂಚಾರ ಮಾಡುತ್ತಲಿರುತ್ತವೆ.

ಕಥೆಗಳನ್ನು ರಚಿಸುವವರು ಪ್ರಾಯಹೋದ ಮೇಲೆ ಬದುಕಿ ಉಳಿದ ಅಜ್ಜಿಯರು ಅಥವಾ ಅಜ್ಜಂದಿರು ಮಾತ್ರವಲ್ಲ. ಪ್ರಾಚೀನ ಕಾಲದಲ್ಲಿ ಇತಿಹಾಸದ ಗತಕಾಲದ ಗುರುತುಗಳು ಮೂಡುವ ಮೊದಲಿನಿಂದಲೂ ಮಾತು ಬಲ್ಲ ಮಾನವಜನಾಂಗಗಳಲ್ಲಿ ಮಾನವನು ಕಥಾನಿರೂಪಣೆಯನ್ನೂ ಶ್ರವಣವನ್ನೂ ತನ್ನ ಜೀವನದ ಆವಶ್ಯಕ ಸಾಧನವೆಂಬ ರೀತಿಯಲ್ಲಿ ಬಳಸುತ್ತಲೇ ಬಂದಿದ್ದಾನೆ. ಕಾಡು ಪ್ರಾಣಿಗಳನ್ನು ಬೇಟೆಯಾಡಿ ಜೀವಿಸುವ ಪ್ರಾಚೀನ ಕಾಲದ ಜನಾಂಗದ ಜನರ

ಜೀವನ ಕ್ರಮದಲ್ಲಿ, ಗುಹೆಗಳಲ್ಲಿ ತಾವು ಬೇಟೆಯಾಡಿ ತಂದ ಪ್ರಾಣಿಗಳ ಜೀವನ ಕ್ರಮವನ್ನು ಚಿತ್ರಿಸುತ್ತಿದ್ದ ಕಾಲದಿಂದಲೇ ತಮ್ಮ ಬೇಟೆಯಲ್ಲಿನ ವಿವಿಧ ಅನುಭವಗಳನ್ನು ಮನೆಯಲ್ಲಿ ಹೆಂಗಸರು (ಕೆಲವೊಮ್ಮೆ ಅವರೂ ಗಂಡಸರೊಡನೆ ಬೇಟೆಗೆ ಹೋಗುತ್ತಿದ್ದರು. ಮಕ್ಕಳು ಚಿಕ್ಕವರಿದ್ದರೆ ಹೊಟ್ಟೆಯ ಮೇಲೆಯೋ ಬೆನ್ನ ಮೇಲೆಯೋ ಸವಾರಿ ಮಾಡಿಸಿಕೊಂಡು ಅಥವಾ ಇಬ್ಬರು ಮಕ್ಕಳಿದ್ದರೆ ಒಂದನ್ನು ಹೊಟ್ಟೆಯ ಮೇಲೆ ಇನ್ನೊಂದನ್ನು ಬೆನ್ನಿನಮೇಲೆ ಕೂಡಿಸಿಕೊಂಡು ಸಂಚಾರಕ್ಕೆ ಹೊರಡುತ್ತಿದ್ದರು.) ಮೈ ರೋಮಾಂಚನ ಹೊಂದಿ ಕೇಳುವ ಹಾಗೆ ಕಥಾರೂಪದಿಂದ ನಿರೂಪಿಸುತ್ತಿದ್ದಿರಬೇಕು. ಅತಿಶಯೋಕ್ತಿಯೂ ಜತೆಯಲ್ಲಿ ಸೇರಿಕೊಳ್ಳುತ್ತಿದ್ದಿತು. ಮಾಟಗಾರಿಕೆಯಿಂದ ನಿಸರ್ಗವನ್ನು ನಿಯಂತ್ರಣದಲ್ಲಿಟ್ಟುಕೊಳ್ಳಬಯಸಿದ್ದ ಪ್ರಾಚೀನ (ಹಾಗು ಅರ್ವಾಚೀನ) ಜನಾಂಗಗಳವರಿಗೆ ನಾಲಿಗೆಯು ಬೇಟೆಯಲ್ಲಿನ ಸಾಧನವಾಗಿದ್ದಂತೆಯೇ ಮಾತು ಕೂಡ ಮಾಟದ ಮಂತ್ರಗಾರಿಕೆಗೆ ಅಗತ್ಯವಾದುದಾಗಿತ್ತು. ಆದುದರಿಂದ ಮಾಟದ ಕಥೆಗಳು ನಾಲಿಗೆಯ ತೊಟ್ಟಿಲಿನಲ್ಲಿ ನಲಿದಾಡುತ್ತಿದ್ದವು.

ಅರಸರ ದರಬಾರುಗಳಲ್ಲಿ ಪರಂಪರೆಯಿಂದ ಕಥೆ ಹೇಳುವ ಲಾವಣಿಕಾರರು (Bards) ನಿಯಮಿತರಾಗಿರುತ್ತಿದ್ದರು. ಅವರು ನೆನಪಿಗೆ ಅನುಕೂಲವಾದ ಪದ್ಯಗಳನ್ನು ತಮ್ಮ ಕಥೆಗಳಿಗೆ ವಾಹಕವಾಗುವಂತೆ ಬಳಸುತ್ತಿದ್ದರು. ಅವರು ಪ್ರಾಚೀನ ವೀರರ ಅದ್ಭುತವಾದ ಕಾರ್ಯಗಳನ್ನೂ ಅತಿಮಾನವರೆಂದು ತಿಳಿಯಲ್ಪಟ್ಟು ದೈವತ್ವಕ್ಕೇರುತ್ತಿದ್ದ ಮಾನವರ

ಶೌರ್ಯ ಸಾಹಸ ಮೊದಲಾದವುಗಳನ್ನೂ ತಂತಿವಾದ್ಯಗಳ ಜತೆಯೊಂದಿಗೆ ಹಾಡುತ್ತಿದ್ದರು. ಇಂಥ ಅಸಂಖ್ಯ ಲಾವಣೆಕಾರರು, ಬೇರೆ ಬೇರೆ ಕಾಲಗಳಲ್ಲಿ ತಮ್ಮ ಜನಾಂಗಗಳಲ್ಲಿ ಬಳಕೆಯಲ್ಲಿದ್ದ ಕಥೆಗಳನ್ನು ಉಳಿಸಿ ಬೆಳೆಸುವಲ್ಲಿಯೂ, ಹೊಸ ಕಥೆಗಳನ್ನು ರಚಿಸುವಲ್ಲಿಯೂ, ತಮ್ಮ ಶಕ್ತಿಯನ್ನು ವ್ಯಯ ಮಾಡಿ ಅಸಂಖ್ಯ ಲಾವಣೆಗಳನ್ನು ಬರೆವಣಿಗೆಯು ರೂಪಿತವಾಗದಿರುವ ತೀರ ಪ್ರಾಚೀನಕಾಲದಿಂದಲೂ ಜನರಲ್ಲಿ ಪ್ರಚಾರ ಮಾಡುತ್ತ ಬರುತ್ತಿದ್ದರು. ಅವುಗಳಲ್ಲಿ ಕಾಲದ ಬಿರುಗಾಳಿಗೆ ಸಿಕ್ಕು ಮರೆವಿನ ಬಂಡೆಗಲ್ಲಿಗೆ ಅಪ್ಪಳಿಸಿ ಒಡೆದುಹೋದ, ಮುಳುಗಿಹೋದ ಕಥೆಗಳ ಹಾಳಿಹಡಗಗಳೆಷ್ಟೋ! ಎಷ್ಟೋ ಕಥಾನೌಕೆಗಳು ಮಹಾಕಾವ್ಯಗಳ ಬಂದರುಗಳಲ್ಲಿ ಸುರಕ್ಷಿತವಾಗಿ ಉಳಿದವು.

ಕಥೆಗಳನ್ನು ಹೇಳುವದು ಸಾಮಾನ್ಯವಾಗಿ ಮೂರುಸಂಜೆ ಹೊತ್ತಿನಲ್ಲಿ, ಅಥವಾ ಊಟಮಾಡಿದ ನಂತರ—ಹೆಚ್ಚಾಗಿ ರಾತ್ರಿಯಲ್ಲಿ. ಹಗಲಿಗೆ ಕಥೆ ಹೇಳೆಂದು ದುಂಬಾಲು ಬೀಳುವ ಹುಡುಗರಿಗೆ ನಮ್ಮ ಕಡೆಯಲ್ಲಿ "ಹಗಲಿಗೆ ಕಥೆ ಕೇಳಿದರೆ ಕತ್ತೆಯಾಗಿ ಹುಟ್ಟುತ್ತಾರೆ" ಎಂಬ ನೆಪ ಹೇಳಿ ತಪ್ಪಿಸಿಕೊಳ್ಳುತ್ತಾರೆ. ಎಷ್ಟೋ ಜಾನಪದ ಕಥೆಗಳು ಬಾಲಕರಿಗಾಗಿಯೇ ರಚಿತವಾಗಿರುವವಾದರೂ ಮನುಷ್ಯನಲ್ಲಿರುವ ಕಥೆ ಕೇಳಬೇಕೆಂಬ ಚಿರಂತನ ಚಾಲತ್ವದ ಮೂಲಕ ಬೇಸರ ನೀಗಿಸಿಕೊಳ್ಳಲು ದೊಡ್ಡವರೂ ಕಥೆಗಳ ಆಶ್ರಯ ಪಡೆಯುತ್ತಾರೆ. ಹಳ್ಳಿಗಳಲ್ಲಿ ಗೃಹಕೈಗಾರಿಕೆಗಳ ಉದ್ಯೋಗದಿಂದ ಜೀವಿಸುವ ಜನರು ಮನರಂಜನೆಗಾಗಿ ಪಟ್ಟಣಗಳಲ್ಲಿರುವ ಸೌಕರ್ಯ

ಸ್ತ್ರೀಯುಳೊಬ್ಬಳ ಪ್ರಾಕೃತ ಭಾವನೆಗಳ ಸ್ಪಷ್ಟಚಿತ್ರಣವೇ ಆಗಿದೆ.

ರಾಮಾಯಣ, ಭಾರತ, ಭಾಗವತ ಮುಂತಾದ ಪ್ರಾಚೀನ ಮಹಾಕಾವ್ಯಗಳಲ್ಲಿ ಮಹಾಕವಿಗಳ ಮಹಾಪ್ರತಿಭೆಯು ಏಕಸೂತ್ರತೆಯು ಹಾಗು ಜೀವನ ದರ್ಶನಗಳ ಕೈವಾಡವು ಬಲವತ್ತರವಾಗಿ ಮಹಾಕಾವ್ಯಗಳನ್ನು ರೂಪಿಸಿದ್ದರೂ ಅವುಗಳಲ್ಲಿ ಬರುವ ನೂರಾರು, ಸಾವಿರಾರು ಕಥೆಗಳು ಎಲ್ಲವೂ ವಾಲ್ಮೀಕಿಯು, ವ್ಯಾಸರ ಅಥವಾ ವೈಶಂಪಾಯನ, ಶುಕ, ಶೌನಕರ ಕಲ್ಪನೆಯ ಕಥೆಗಳೆಂದು ಹೇಳುವ ಹಾಗಿಲ್ಲ. ಅನೇಕ ಜಾನಪದ ಕಥೆಗಳು ಅವುಗಳಲ್ಲಿ ಅಲ್ಲಲ್ಲಿ ಸೇರಿಸಲ್ಪಟ್ಟಿವೆ. ಮಹಾಭಾರತದ ಮುಖ್ಯ ಕಥೆಗೆ ನೇರವಾಗಿ ಸಂಬಂಧಿಸಿದ ದ್ರೌಪದಿ, ಕೀಚಕ, ಹಾಗು ಮಲ್ಲಶಾಲೆಯಲ್ಲಿನ ಭೀಮ-ಕೀಚಕ ಪ್ರಸಂಗಗಳೂ ಯಾವದೊಂದು ಜಾನಪದ ಕಥೆಯನ್ನೇ ಮಹಾಭಾರತದ ಕಥೆಗೆ ಜೋಡಿಸಿದಂತೆ ಕಾಣುತ್ತವೆ. ರಾಮಾಯಣದ ವಾತಾಪಿ–ಇಲ್ವಲ–ಹಾಗು ಅಗಸ್ತ್ಯರ ಕಥೆಯೂ ಜಾನಪದ ಕಥಾರೂಪದ ಇನ್ನೊಂದು ಮಾದರಿಯಾಗಿದೆ.

ಈ ಪ್ರಾಚೀನ ಜನಾಂಗಗಳ ಜೀವನದ ಐತಿಹಾಸಿಕ ದಂತಕಥೆಗಳ ರೂಪದ ಈ ಕಾವ್ಯಗಳು ಅನೇಕ ಜಾನಪದ ಕಥಾಕೋಶಗಳಾಗಿ ಹೊಸ ಹೊಸ ಜಾನಪದ ಕಥೆಗಳಿಗೂ ಸ್ಫೂರ್ತಿಯ ಆಕರಗಳಾಗಿ ಪರಿಣಮಿಸಿದವು.

ಹೋಮರನ ಇಲಿಯಡ್, ಒಡಿಸಿ ಕಾವ್ಯಗಳಲ್ಲಿ ಜಾನಪದ ಕಥೆಗಳ ವೀರರ ಅನೇಕ ಕಥೆಗಳು ಸೇರ್ಪಡೆಯಾಗಿವೆ. ಜೇಸನ್ನನು ಚಿನ್ನದ ಉಣ್ಣೆಯನ್ನು ತರಲು ಮಾಡಿದ ಸಾಹಸ

ಗಳು, ಸೇಬಿನ ಗಿಡದ ಮೇಲೆ ಇರುವ ಚಿನ್ನದ ಉಣ್ಣೆಯನ್ನು ಕಾಯುವ ಮೂರು ಹೆಡೆಗಳ ಘಟಸರ್ಪವನ್ನು ಮಂತ್ರದಿಂದ ನಿದ್ದೆಗೈಯುವಂತೆ ಮಾಡಿದ ಮೀಡಿಯಾಕುಮಾರಿಯ ಮಾಂತ್ರಿಕ ಸಹಾಯ ಮೊದಲಾದವುಗಳಲ್ಲಿನ ಅತಿಮಾನವ ಅಂಶಗಳು, ಮಾನವನ ಮಹತ್ತರವಾದ ಶೌರ್ಯ-ಧೈರ್ಯ ಸಾಹಸಗಳನ್ನು ರಾಮಗನ್ನಡಿಯಲ್ಲಿ ಕಂಡು ಚಿತ್ರಿಸಿದ ಜಾನಪದ ಕಥೆಗಾರನ ಕಾಲ್ಪನಿಕ ಘಟನಾನಿರೂಪಣೆಯ ಉದಾಹರಣೆಯಾಗಿದೆ.

ಒಡಿಸಿಯಸ್ಸನು ತನ್ನ ಸಂಗಡಿಗರೊಡನೆ ಒಕ್ಕಣ್ಣಿನ ರಾಕ್ಷಸನ ಗುಹೆಯಲ್ಲಿ ಸಿಕ್ಕ ಘಟನೆಗಳು, ಒಡಿಸಿಯಸ್ಸನು ಬುದ್ಧಿವಂತಿಕೆಯಿಂದ ಒಕ್ಕಣ್ಣಿನ ರಾಕ್ಷಸನ ಕಣ್ಣನ್ನು ಕೆಂಪಗೆ ಕಾದ ಕಬ್ಬಿಣದ ಸಲಾಕೆಯಿಂದ ಸುಟ್ಟುಬಿಡುವದು, ಗುಹೆಯಿಂದ ಹೊರಗೆ ಹೋಗುವ ಕುರಿಯ ಹೊಟ್ಟೆಯ ಕೆಳಗೆ ಜೋತು ಕೊಂಡು ತಪ್ಪಿಸಿಕೊಳ್ಳುವದು, ಮೊದಲಾದ ಚಮತ್ಕಾರಿಕವಾದ ಘಟನೆಗಳು ಕ್ರೂರವಾದ ನಿಸರ್ಗದೊಡನೆ ಹೋರಾಟಮಾಡಿ ತನ್ನ ಬುದ್ಧಿವಂತಿಕೆಯಿಂದ ನಿಸರ್ಗದ ಭಯಂಕರ ಶಕ್ತಿಯನ್ನು ಸೋಲಿಸಿ ಪಡೆದ ಗೆಲುವಿನ ಆತ್ಮವಿಶ್ವಾಸದ ಪ್ರತೀಕವಾದ ಜಾನಪದ ಕಥೆಗಾರನ ಕಲ್ಪನಾಸೃಷ್ಟಿಯೇ ಆಗಿದೆ. ಬೈಬಲ್ ಗ್ರಂಥದಲ್ಲಿಯೂ ಕೆಲವು ಜಾನಪದ ಕಥೆಗಳು ಸೇರ್ಪಡೆಯಾಗಿವೆ.

ಜಾನಪದ ಕಥೆಗಳ ಸಂಗ್ರಹರೂಪವಾದ ಕಥಾಸಾಹಿತ್ಯ ಪರಂಪರೆಯು ಸಾಹಿತ್ಯದಲ್ಲಿ ಒಂದು ಮಹತ್ವವಾದ ಇತಿಹಾಸವನ್ನೊಳಗೊಂಡಿದೆ. ಇಸೋಪನ ನೀತಿ ಕಥೆಗಳು ಜಾನಪದ ಕಥೆಗಳನ್ನೊಳಗೊಂಡ ಒಂದು ಪ್ರಾಚೀನ ಗ್ರಂಥ.

ಜಾನಪದ ಕಥೆಗಳ ಮತ್ತೊಂದು ದೊಡ್ಡ ಸಂಗ್ರಹವು ಗುಣಾಢ್ಯನು ಪೈಶಾಚಿ ಭಾಷೆಯಲ್ಲಿ ಬರೆದ ಬೃಹತ್ ಕಥೆಯಾಗಿದ್ದಿತು. ಆ ಗ್ರಂಥವು ಈಗ ಉಪಲಬ್ಧವಿಲ್ಲದಿದ್ದರೂ ಅದರ ಸಂಗ್ರಹರೂಪವು ಕ್ಷೇಮೇಂದ್ರನ ಬೃಹತ್ಕಥಾಮಂಜರಿ, ಸೋಮದೇವನ ಕಥಾಸರಿತ್ಸಾಗರ (ಬುಧಸ್ವಾಮಿಯದೂ ಸಣ್ಣ ಗ್ರಂಥವಿದೆ) ಎಂಬ ಸಂಸ್ಕೃತಗ್ರಂಥಗಳಲ್ಲಿಯೂ, ತಮಿಳಿನ 'ಪೆರುಂಗತೈ' ಎಂಬ ಕಥಾಸಂಗ್ರಹದಲ್ಲಿಯೂ ದೊರೆಯುತ್ತದೆ. ಗುಣಾಢ್ಯನ ಬೃಹತ್ಕಥೆಯ ಅನುವಾದಗಳಲ್ಲಿ ಉಜ್ಜಯನಿಯ ಉದಯನರಾಜ ಹಾಗು ಅವನ ಮಗ ನರವಾಹನದತ್ತನ ಕಥೆಗಳು ಮುಖ್ಯವಾಗಿದ್ದರೂ ಅವು ಜಾನಪದ ಕಥೆಗಳೇ ಆಗಿವೆ. ಉದಯನನ ಕಥೆಯನ್ನು ಉಜ್ಜಯನಿಯ ಗ್ರಾಮವೃದ್ಧರು ಹೇಳುವದರಲ್ಲಿ ಆಸಕ್ತರಾಗಿದ್ದರೆಂದು ಕಾಲಿದಾಸನು ಮೇಘದೂತದಲ್ಲಿ ಹೇಳುತ್ತಾನೆ. ನೂರಾರು ಜಾನಪದ ಕಥೆಗಳು ಬೃಹತ್ಕಥೆಯಲ್ಲಿ ಸೇರ್ಪಡೆಯಾಗಿ ಪ್ರಾಚೀನ ಭಾರತದ ಜಾನಪದ ಕಥಾಸಂಪತ್ತು ಎಷ್ಟು ಶ್ರೀಮಂತವಾಗಿದ್ದಿತೆಂಬುದನ್ನು ತಿಳಿಸಿಕೊಡುತ್ತವೆ. ಬೃಹತ್ಕಥೆಯಲ್ಲಿ ಪಶುಪಕ್ಷಿಗಳ ಕಥೆಗಳುಂಟು. ಮಾಟಗಾರರ ಕಥೆಗಳುಂಟು. ಯಕ್ಷಿಣಿಯರ ಕಥೆಗಳುಂಟು. ಬುದ್ಧಿಶಕ್ತಿಯ ಪರೀಕ್ಷೆ ಮಾಡುವ ಸಮಸ್ಯಾತ್ಮಕವಾದ ಬೇತಾಳಪಂಚವಿಂಶತಿ ಕಥೆಗಳುಂಟು. ಮೂರ್ಖರ, ದಡ್ಡರ ಕಥೆಗಳುಂಟು. ವೇಶ್ಯೆಯರು, ಕಳ್ಳರು, ಜೂಜುಖೋರರು, ನಟರು, ಸಿದ್ಧರು, ಋಷಿಗಳು, ಕಾಪಾಲಿಕರು, ಮೊದಲಾದವರ ವಿಸ್ತಾರವಾದ ಜಾನಪದ ಜಾತ್ರೆಯ ಸಂತೆಯೇ ಅದರಲ್ಲಿದೆ.

ಪಂಚತಂತ್ರದ ಭೇದಪ್ರಕರಣ, ವಿಶ್ವಾಸವ್ಯಾವರ್ಣನ ಮೊದಲಾದ ಪ್ರಕರಣಗಳಲ್ಲಿ ಮುಖ್ಯ ಕಥೆಯು ರಾಜನೀತಿಯನ್ನು ವಿವರಿಸುವದಕ್ಕೆ ವಿಷ್ಣುಶರ್ಮನಿಂದ ರಚಿತವಾಗಿದ್ದಿರಬಹುದಾದರೂ ಕಥೆಯೊಳಗೆ ಕಥೆಯಾಗಿ ಬರುವ ಅನೇಕ ಕಥೆಗಳು ಜನಪದದಲ್ಲಿ ಪ್ರಚಾರದಲ್ಲಿದ್ದು ಯೋಗ್ಯ ಸಂದರ್ಭದಲ್ಲಿ ಉದಾಹರಣರೂಪವಾಗಿ ಪಂಚತಂತ್ರದಲ್ಲಿ ಉಕ್ತವಾಗಿವೆಯೆಂದು ಹೇಳಬಹುದು. ವಸುಭಾಗಭಟ್ಟನ ಕೃತಿಯಾದ ಪಂಚತಂತ್ರವನ್ನು ಅನುವಾದ ಮಾಡಿರುವ ದುರ್ಗಸಿಂಹನ ಕೃತಿಯಲ್ಲಿ ಬರುವ ಮೊಲವು ಸಿಂಹನನ್ನು ಕೊಂದ ಕಥೆ, ಸೊಸೆಯ ಮಾತನ್ನು ಕೇಳದ ಅತ್ತೆಯ ಕಥೆ, ಭೇರಿಯಲ್ಲಿ ಹೊಕ್ಕ ನರಿಯ ಕಥೆ ಮುಂತಾದ ಕಥೆಗಳು ಜಾನಪದ ಕಥೆಗಳ ಸ್ವರೂಪವನ್ನು ಹೊಂದಿವೆ.

ಬುದ್ಧ ಜಾತಕ ಕಥೆಗಳಲ್ಲಿನ ಅನೇಕ ಪಶುಪಕ್ಷಿಗಳ ಕಥೆಗಳೂ. ಜನಜೀವನದ ಚಿತ್ರಣ ರೂಪವಾದ ಹಲವು ಕಥೆಗಳೂ ಇಲ್ಲಿ ಉಲ್ಲೇಖನೀಯವಾಗಿವೆ.

ಜೈನರು ಕಥಾಸಾಹಿತ್ಯಕ್ಕೆ ಬಹು ಮಹತ್ವದ ಕೊಡುಗೆಗಳನ್ನು ಸಲ್ಲಿಸಿದ್ದಾರೆ. ತಮ್ಮ ಧರ್ಮಪ್ರಸಾರದ ದೃಷ್ಟಿಯಿಂದ ಅವರು ಅನೇಕ ಕಥೆಗಳನ್ನು ಬರೆದಿದ್ದಾರೆ. ಅದರಲ್ಲಿ ಅವರು ಜನರಲ್ಲಿ ಪ್ರಸಾರದಲ್ಲಿದ್ದ ಅನೇಕ ದಂತಕಥೆಗಳನ್ನೂ (Legends) ಜಾನಪದ ಕಥೆಗಳನ್ನೂ ತಮ್ಮ ಧರ್ಮತತ್ವಗಳನ್ನೂ ನೀತಿಮಹತ್ವವನ್ನೂ ಪ್ರತಿಪಾದಿಸಲು ಉಪಯೋಗಿಸಿದ್ದಾರೆ. ಸಂಸ್ಕೃತ, ಪ್ರಾಕೃತ, ಅಪಭ್ರಂಶ, ಕನ್ನಡ ಮುಂತಾದ ಭಾಷೆಗಳಲ್ಲಿ ಅವರ ಧಾರ್ಮಿಕ ಕಥೆಗಳ ಅಪಾರವಾದ ಸಾಹಿತ್ಯರಾಶಿಯಿದೆ. ವಡ್ಡಾ

ರಾಧನೆಯ ಕಥೆಗಳು, ನಯಸೇನನ ಧರ್ಮಾಮೃತ, ಹರಿಷೇಣನ ಕಥಾಕೋಶ, ಜಿನಸೇನಾಚಾರ್ಯರ ಪೂರ್ವಪುರಾಣ, ಗುಣ ಭದ್ರರ ಉತ್ತರ ಪುರಾಣ, ಉದ್ಯೋತನ ಸೂರಿಯ ಕುವಲಯ ಮಾಲಾ ಹಾಗು ಇತರ ಸಾಹಿತ್ಯಗಳಲ್ಲಿ ಜೈನರ ಧಾರ್ಮಿಕ ಹಾಗು ನೀತಿ ಕಥೆಗಳನ್ನು ನೋಡಬಹುದು. ವಡ್ಡಾರಾಧನೆಯ ವಿದ್ಯುಚ್ಚೋರನ ಕಥೆಯಲ್ಲಿ ಕಣ್ಣಿಗೆ ಅಂಜನ ಹಚ್ಚಿಕೊಂಡು ಅದೃಶ್ಯನಾಗಿ ರಾತ್ರಿಯಲ್ಲಿ ಕಳವು ಮಾಡುವುದು, ಹಗಲಿಗೆ ಭಿಕ್ಷುಕನಾಗಿ ತಿರುಗುವದು ಮೊದಲಾದ ಸಂಗತಿಗಳು ಜಾನಪದ ಕಥಾಸರಣಿಯವೇ ಆಗಿವೆ.

ಜೈನರು ಲೌಕಿಕ ಕಥಾ ಸಾಹಿತ್ಯಕ್ಕೂ ಬೆಲೆಯುಳ್ಳ ಕಾಣಿಕೆಗಳನ್ನು ಸಲ್ಲಿಸಿದ್ದಾರೆ. 'ಸಿಂಹಾಸನ ದ್ವಾತ್ರಿಂಶಿಕಾ' ಗ್ರಂಥವು ಒಬ್ಬ ಜೈನ ಲೇಖಕನಿಂದ ರಚಿತವಾಗಿದೆ.

ವಿಕ್ರಮಾದಿತ್ಯನ ಕುರಿತಾದ ಹಲವಾರು ಕಥೆಗಳು ಜನರಲ್ಲಿ ಪ್ರಚಾರದಲ್ಲಿದ್ದವು. ಅವುಗಳನ್ನು ಜನರು ಬಹಳ ಆಸಕ್ತಿಯಿಂದ ಹೇಳಿ, ಕೇಳಿ ಪ್ರಚಾರದಲ್ಲಿಟ್ಟಿದ್ದರೆಂದು ಕಾಣುತ್ತದೆ. ಆ ಕಥೆಗಳನ್ನು ಸಂಸ್ಕೃತದ ಹಲವು ಕವಿಗಳು ಗ್ರಂಥರೂಪವಾಗಿ ಬರೆದರು. ಬೇತಾಳಪಂಚವಿಂಶತಿ ಕಥೆಗಳು, ಸಿಂಹಾಸನ ದ್ವಾತ್ರಿಂಶಿಕಾ, ಭಟ್ಟಿವಿಕ್ರಮಾದಿತ್ಯನ ಕಥೆಗಳು, ಬಹು ಜನಪ್ರಿಯವಾದ ಕಥಾಸಂಗ್ರಹಗಳಾಗಿದ್ದು ಮುಂದಿನ ಅನೇಕ ಜಾನಪದ ಕಥೆಗಳು ರಚಿತವಾಗುವುದಕ್ಕೆ ಬಹಳ ಸ್ಫೂರ್ತಿಯ ಸೆಲೆಗಳಾದವು.

ಸ್ತ್ರೀಸಾಹಸದ ಕುರಿತಾದ ಬುದ್ಧಿವಂತಿಕೆಯ ಚಮತ್ಕಾರಿಕವಾದ ಕಥೆಗಳು ತುಂಬ ಕುತೂಹಲಕಾರಿಯಾಗಿದ್ದು ಜನರಲ್ಲಿ

ತುಂಬ ಪ್ರಚಾರದಲ್ಲಿವೆ. ಅವು ಶೃಂಗಾರ ಶುಕಸಪ್ತತಿಗಳೆಂದು ಪ್ರಸಿದ್ಧವಾಗಿವೆ. ನೀತಿ ಪ್ರಧಾನವಾದ ಗುರಿ ಅವರಲ್ಲಿದ್ದರೂ ವಾಸ್ತವಿಕ ಪ್ರಪಂಚದ ಅನೇಕ ಅನೈತಿಕ ಪ್ರಣಯದ ಅಶ್ಲೀಲ ಚಿತ್ರಗಳೂ ಅವರಲ್ಲಿ ಬರುತ್ತವೆ. ಬೊಕೆಶಿಯೊನ ಕಥೆಗಳು ಇದೇ ಮಾದರಿಯವು.

ಯುರೋಪಿನ ಸಾಹಿತ್ಯದಲ್ಲಿ ಹನ್ನೆರಡನೆಯ ಶತಮಾನದ ವರೆಗೆ ಕಥೆಗಳು ಕಲ್ಪನಾಸಂಪತ್ತಿಯಲ್ಲಿ ಬಡವಾಗಿ ಗಿದ್ದವು. ಧರ್ಮಯುದ್ಧಗಳ ಕಾಲದಲ್ಲಿ ಇಂಗ್ಲಂಡ ಹಾಗು ಇತರ ಯುರೋಪಿಯನ್ ರಾಷ್ಟ್ರಗಳ ಸೈನ್ಯಗಳು ಪ್ಯಾಲೆಸ್ಟಾಯಿನ್ (ಇಸ್ರೇಲ) ದಲ್ಲಿ ಯುದ್ಧಮಾಡಲು ಬಂದಿದ್ದವು. ಆಗ ಪೂರ್ವ ದೇಶಗಳ ಸಂಪರ್ಕ ಹೆಚ್ಚಾಗಿ ಭಾರತ ಹಾಗು ಇತರ ದೇಶಗಳ ಜಾನಪದ ಕಥೆಗಳ ಪ್ರಚಾರವು ಯುರೋಪಿಯನ್ನರಲ್ಲಿ ಆಯಿತು. ಆಯರ್ಲಂಡದ ಕೆಲ್ಟಿಕ್ ಜನರ ಆರ್ಥರನ ಅದ್ಭುತರಮ್ಯ ಕಥೆಗಳೂ, ಯಕ್ಷಿಣಿಯರ ಕಥೆಗಳೂ ಯುರೋಪಿಯನ್ ಜಾನಪದ ಕಥೆಗಳ ಬೆಳವಣಿಗೆಗೆ ತುಂಬ ಸಹಾಯ ಮಾಡಿದವು. ಆಮೇಲೆ ಸ್ವಲ್ಪಕಾಲದಲ್ಲಿ ಪಂಚತಂತ್ರವು ಹದಿಮೂರನೆಯ ಶತಕದಲ್ಲಿ ಲ್ಯಾಟಿನ್, ಜರ್ಮನ್ ಮೊದಲಾದ ಭಾಷೆಗಳಲ್ಲಿ ಅನುವಾದಿತವಾಯಿತು. ಹದಿಮೂರನೆಯ ಶತಮಾನದಲ್ಲಿ ಗದ್ಯಸಾಹಿತ್ಯವು ಮುಂದೆ ಬಂದು ಜಾನಪದ ಕಥೆಗಳ ಅದ್ಭುತ ವಿಕಾಸವಾಯಿತು. ಈ ಕಥೆಗಳನ್ನು ಜನರು ಅರಗಿಸಿಕೊಂಡು ಮತ್ತೆ ಹೊಸ ಹೊಸ ಕಥೆಗಳನ್ನು ರಚಿಸಿ ಪ್ರಚಾರದಲ್ಲಿ ತಂದರು. ಮಧ್ಯಕಾಲದ ರೊಮಾನ್ಸ್ ಎಂಬ ಐತಿಹಾಸಿಕ ಕಾಲ್ಪನಿಕ ರಮ್ಯಸಾಹಿತ್ಯವು ಬೆಳೆಯಿತು. ಬ್ಯಾಬಲ್ಲಿನ ಕಥೆಗಳ

ಪರಿಣಾಮವೂ ಜಾನಪದ ಕಥೆಗಳ ಬೆಳವಣಿಗೆಗೆ ಕಾರಣ ವಾಯಿತು. ಇವು ಮತ್ತೆ ಬೊಕೆಶಿಯೋ, ಚಾಸರ ಮೊದಲಾದವರ ಕಥೆಗಳಲ್ಲಿ ಹೊಸ ಆಕಾರ ತಾಳಿ ಮತ್ತೆ ಜನರಲ್ಲಿ ಪ್ರಸಾರ ವಾದವು. ಅರೇಬಿಯನ್ ನ್ಯಾಟ್ಸ್ ಕಥೆಗಳ ಭಾಷಾಂತರವು ಫ್ರೆಂಚ್ ಭಾಷೆಯಲ್ಲಿ ಆಗಿ ತುಂಬ ಜನಾದರಣೆಯನ್ನು ಪಡೆದು ಇತರ ದೇಶಗಳಿಗೆ ಹಬ್ಬಿತು.

ಜರ್ಮನಿಯಲ್ಲಿ ಗ್ರಿಮ್ ಸಹೋದರರು ಬರುವ ಮೊದಲೆ ಅನೇಕ ಜಾನಪದ ಸಂಕಲನಗಳಾಗಿದ್ದರೂ ಗ್ರಿಮ್ ಸೋದರರು ಜನಸಾಮಾನ್ಯರು ಹೇಳುವ ಕಥೆಗಳನ್ನು ಶಬ್ದಕ್ಕೆ ಶಬ್ದ ಬದಲು ಮಾಡದೆ, ಹೇಳಿದಂತೆಯೇ ಬರೆದುಕೊಂಡು ಇನ್ನೂರರಷ್ಟು ಜಾನ ಪದ ಕಥೆಗಳನ್ನು ಸಂಗ್ರಹಿಸಿ ಜನತೆಯ ಸಾಹಿತ್ಯದ ಆಕರ್ಷ ಣೆಯ ಕುರಿತು ಎಲ್ಲ ಕಡೆ ಆಸಕ್ತಿಯನ್ನು ಬೆಳೆಸಿದರು. ಆಮೇಲೆ ಜಾನಪದ ಲಾವಣಿಗಳನ್ನೂ, ಇತರ ಪದ್ಯ ಸಾಹಿತ್ಯಗಳನ್ನೂ ಸಂಗ್ರಹಿಸುವವರು ಬಹಳವಾದರು. ಜನಪದ ಸಾಹಿತ್ಯ ಸಂಘ (Folklore Society) ಗಳು ಅನೇಕ ದೇಶಗಳಲ್ಲಿ ಸ್ಥಾಪಿತ ವಾದವು. ಜಗತ್ತಿನ ಪ್ರತಿಯೊಂದು ದೇಶದಲ್ಲಿನ ಜಾನಪದ ಕಥಾಸಂಕಲನಗಳು ಸಿದ್ಧವಾಗಿ ಜಾನಪದ ಕಥಾಸಾಹಿತ್ಯ ವೆಂಬುದು ಬಹುದೊಡ್ಡ ಮಹಾಸಾಗರದ ಹಾಗೆ ಬೆಳೆದಿರುವುದು. ಕಥಾಸಂಗ್ರಹಣೆ, ಹಾಗು ಸಂಶೋಧನೆಗಳು ವೈಜ್ಞಾನಿಕ ವಿಧಾನ ಗಳನನುಸರಿಸಿ ಶಾಸ್ತ್ರದ ಪ್ರತಿಷ್ಠೆಯನ್ನು ಪಡೆದಿವೆ.

# ೩. ಜಾನಪದ ಕಥೆಗಳ ಪ್ರಕಾರಗಳು

ಜಾನಪದ ಕಥೆಗಳು ಮೂರು ಮುಖ್ಯ ವರ್ಗಗಳಲ್ಲಿ ವಿಭಾಗವಾಗುತ್ತವೆ. ೧. ಪುರಾಣ ಕಥೆಗಳು ( Myths ) ೨. ಐತಿಹಾಸಿಕ ದಂತಕಥೆಗಳು ( Legends), ಹಾಗೂ ೩. ಮನ ರಂಜನೆಯು ಸಲುವಾಗಿಯೆ ಮುಖ್ಯವಾಗಿ ನಿರೂಪಿತವಾದ ಕಥೆ ಗಳು ಎಂದು ಎನ್‌ಸೈಕ್ಲೊಪೀಡಿಯಾ ಬ್ರಿಟಾನಿಕಾದಲ್ಲಿದೆ.

ಪುರಾಣ ಕಥೆಗಳ ಉದ್ದೇಶವು ಮೊದಲನೆಯದಾಗಿ ವಿಶ್ವದ ಉತ್ಪತ್ತಿ-ಸ್ಥಿತಿ-ಪ್ರಳಯುಗಳ ವಿವರಣೆಯುನ್ನು ಕೊಡುವದಾಗಿದೆ. ಎರಡನೆಯದಾಗಿ ನಿಸರ್ಗದಲ್ಲಿನ ವೈಶಿಷ್ಟ್ಯಗಳನ್ನು ವಿವರಿಸುವ ದಾಗಿದೆ. ಮಳೆಯು ಕೆಲವು ಹಕ್ಕಿಗಳ ಕೂಗುಗಳನ್ನಾಗಲಿ, ಇತರ ಚಟುವಟಿಕೆಗಳನ್ನಾಗಲಿ ಯಾಕೆ ಅನುಸರಿಸುತ್ತದೆ ಎಂಬು ದನ್ನು ವಿವರಿಸುವದು ಒಂದು ಉದಾಹರಣೆ. ಮೂರನೆಯ ದಾಗಿ ಮಾನವ ನಾಗರಿಕತೆಯ ಉತ್ಪತ್ತಿಯುನ್ನು ವಿವರಿಸುವದು. ಪ್ರೋಮಿಥಿಯುಸನು ಮಾನವರಿಗೆ ಬೆಂಕಿಯ ಉಪಯೋಗವನ್ನು ಹೇಗೆ ಕಲಿಸಿ ಅವರು ನಾಗರಿಕರಾಗುವಂತೆ ಮಾಡಿದನೆಂಬುದು ಒಂದು ಉದಾಹರಣೆ. ನಾಲ್ಕನೆಯದಾಗಿ ಸಾಮಾಜಿಕ ಅಥವಾ ಧಾರ್ಮಿಕ ವಿಧಿಯ ಮೂಲವನ್ನು ವಿವರಿಸುವದು ಅಥವಾ ಧಾರ್ಮಿಕ ಪೂಜೆಯ ಇತಿಹಾಸ ಹಾಗು ಲಕ್ಷಣವನ್ನು ವಿವರಿ ಸುವದು.

ಐತಿಹಾಸಿಕ ದಂತ ಕಥೆಗಳಲ್ಲಿ ಇತಿಹಾಸದ ಕೇಂದ್ರಬಿಂದು ವಿದ್ದರೂ, ಅದರ ಸುತ್ತು ಕಲ್ಪನಾವಿಲಾಸವು ಹೆಣೆಯಲ್ಪಟ್ಟು ಮೂಲ ಇತಿಹಾಸವು ಹೊಸ ರೂಪ ಪಡೆಯುತ್ತದೆ.

ಜಾನಪದ ಕಥೆಗಳು ಮುಖ್ಯವಾಗಿ ಮನರಂಜನೆಯನ್ನೆ ಗುರಿಯನ್ನಾಗಿಟ್ಟುಕೊಂಡಿವೆ. ಬೆಂಕಿಯ ಸುತ್ತಲಿನ ಕಥೆಗಳು (Fireside Tales), ಚಳಿಗಾಲದ ಇರುಳಿನ ಕಥೆಗಳು, ನಾವಿಕರ ಕಥೆಗಳು (ಅಥವಾ ಹಡಗಿನಲ್ಲಿಯ ಕಥೆಗಳು), ಬಾಲಸಾಹಿತ್ಯದ ಕಥೆಗಳು, ಯಾತ್ರಿಗಳಲ್ಲಿನ ಹಾಗೂ ಒಂಟೆಯ ಪ್ರಯಾಣ ( Caravan ) ದಲ್ಲಿನ ಕಥೆಗಳು, ದೀರ್ಘವಾದ ಹಗಲು, ರಾತ್ರಿಗಳ ಬೇಸರವನ್ನು ಕಳೆಯಲು ಉಪಯುಕ್ತವಾಗಿವೆ.

ಜಾನಪದ ಕಥೆಗಳನ್ನು ಹೇಳುವದರಲ್ಲಿ ವೈಶಿಷ್ಟ್ಯಯುತವಾದ ಪ್ರಾರಂಭ-ಮುಕ್ತಾಯಗಳು ಈ ಕಿನ್ನರ-ಯಕ್ಷಿಣಿ ಕಥೆಗಳನ್ನು ಪ್ರತ್ಯೇಕವಾಗಿ ಎತ್ತಿ ತೋರುತ್ತವೆ.

"ಒಂದಾನೊಂದು ಕಾಲದಲ್ಲಿ", "ಒಂದಲ್ಲ ಒಂದು ಕಾಲದಲ್ಲಿ ", " ಒಳ್ಳೆಯ ಅರಸನಾದ ಅರ್ಥರನ ಕಾಲದಲ್ಲಿ ", " ತೀರ ಪ್ರಾಚೀನ ಕಾಲದಲ್ಲಿ""ಬ್ರಹ್ಮದತ್ತನು ಕಾಶಿಯಲ್ಲಿ ರಾಜ್ಯವಾಳುತ್ತಿರುವಲ್ಲಿ" ಹೀಗೆ ಆ ಕಥೆಗಳ ಪ್ರಾರಂಭವು ಆಗುವದು ಸಾಮಾನ್ಯವಾಗಿದೆ.

ಮುಕ್ತಾಯದಲ್ಲಿ " ಅವರು ಸುಖಸಂತೋಷದಿಂದ ಉಳಿದರು", "ಆಯಿತು. ಕಥೆ ಮುಕ್ತಾಯವಾಯಿತು," "ಇಲಿಯು ಓಡಿತ್ತು: ಕಥೆಯು ಮುಗಿದಿತ್ತು", "ಸುಖಸಂಕಥಾವಿನೋದ ದೋಳಿರ್ದರ್ " ಮುಂತಾಗಿ ಕಥೆಯು ಸಾಮಾನ್ಯವಾಗಿ ಸುಖಾಂತವಾಗಿ ಕೊನೆಗೊಳ್ಳುತ್ತದೆ.

ಉತ್ತರ ಕನ್ನಡದ ಒಂದು ಜಾನಪದ ಕಥಾಸಂಪ್ರದಾಯದ ಕಥೆಗಳಲ್ಲಿ ಪ್ರಾರಂಭದಲ್ಲಿ ಈ ಮಾತುಗಳಿರುವದು ಸಾಮಾನ್ಯವಾಗಿದೆ.

"ಅರಸು, ಪ್ರಧಾನಿ, ಕೋಲಕಾರ, ತಳವಾರ, ಹೆಳವಾರ, ಕುಂಟು, ಕುರುಡ, ಕತ್ತಿಲಿ ಕಡಿದಾಟ, ಎತ್ತಿಲಿ ಇರಿದಾಟ" ಈ ಮಾತುಗಳನ್ನು ವೇಗವಾಗಿ ಹೇಳಿ ನಂತರ "ಸೂರ್ಯ ಶೇಖರನೆಂಬ ರಾಜನಿದ್ದ, ಚಂದ್ರಶೇಖರನೆಂಬ ಮಂತ್ರಿಯಿದ್ದ" ಎಂದು ಹೇಳಿ ಎಲ್ಲ ಕಥೆಗಳು ಪ್ರಾರಂಭವಾಗುತ್ತವೆ.

ಅವುಗಳಲ್ಲಿ ಬರುವ ರಾಕ್ಷಸರು ಮಹಾಭಾರತದ ಹಿಡಿಂಬ ಕಿಮ್ಮೀರರಂತೆ "ನರಮನುಷ್ಯರ ಪರಿಮಳ ಬರುತ್ತದೆ" ಎಂದು ಹೇಳುವದು ಸಾಮಾನ್ಯವಾಗಿದೆ.

ಏಳು ಸಮುದ್ರಗಳ ಆಚೆಯಿರುವ ರಾಜಕುಮಾರಿಯನ್ನು ಸಂಧಿಸಲು ರಾಜಕುಮಾರನು ಆ ಗುಡ್ಡ ದಾಟಿ, ಈ ಗುಡ್ಡ ದಾಟಿ, ಮಕ್ಕಿಮರುಗುಡ್ಡ ದಾಟಿ ಏಳು ಸಮುದ್ರಗಳ ಆಚೆಯಿರುವ ದ್ವೀಪವನ್ನು ತಲುಪುತ್ತಾನೆ. "ಏಳು ಸಮುದ್ರ ದಾಟಿದೆ, ಏಳು ಕೆರೆಯ ನೀರು ಕುಡಿದೆ" ಎಂಬ ಮಾತು 'ಬಹಳ ಕಠಿಣವಾದ ಕೆಲಸ ಮಾಡಬೇಕಾಯಿತು' ಎಂಬ ಅರ್ಥದಲ್ಲಿ ಜನರ ದೇಸಿ ಮಾತಿನಲ್ಲಿ ರೂಢವಾಗಿದೆ. ಹಾಗೆಯೇ ಏಳು ಹೆಡೆಗಳುಳ್ಳ ಘಟಸರ್ಪಗಳೂ ಬರುತ್ತವೆ. ಏಳು ಕನ್ನಿಕೆಯರೂ ಬರುವದುಂಟು.

ಕಥಾತಂತ್ರದಲ್ಲಿ ಹಿಂದೆ ಹೇಳಿದ ರೀತಿಯ ಮಾತುಗಳನ್ನು ಪುನರುಚ್ಚರಿಸುವದರಲ್ಲಿ ಕಥೆ ಹೇಳುವವರೂ ಕೇಳುವವರೂ ಕವಿತೆಯ ಪ್ರಾಸದ ಶಬ್ದಗಳ ಹೊಂದಿಕೆಯನ್ನು ಕೇಳಿ ಸಂತೋಷಪಟ್ಟಂತೆ ಸಂತೋಷವನ್ನು ಅನುಭವಿಸುತ್ತಾರೆ. "ರಷ್ಯನ್ ಜಾನಪದ ಕಥೆಗಳು" ಗ್ರಂಥದಲ್ಲಿ "ಹುಂಜವೂ, ಅವರೆಯ ಕಾಳೂ" ಎಂಬ ಕಥೆಯಲ್ಲಿ ಕೋಳಿಯು ಹಿಂದೆ ಹೇಳಿದ ಮಾತು

ಗಳನ್ನು ಮುಂದೆ ಮಾತನಾಡುವವರ ಸಂಗಡ ಹೇಳುವ ಮಾತಿ
ನೊಂದಿಗೆ ಪುನರುಚ್ಚರಿಸುತ್ತ ಹೋಗುತ್ತದೆ. "ಹುಂಜದ ಗಂಟ
ಲಿನಲ್ಲಿ ಕಾಳು ಸಿಕ್ಕಿಕೊಂಡು ಬಿಟ್ಟಿದೆ. ರೊಟ್ಟಿ ಕೊಟ್ಟರೆ ಬಾಚ
ಣಿಗೆಯವರು ಬಾಚಣಿಗೆ ಕೊಡುತ್ತಾರೆ. ಆ ಬಾಚಣಿಗೆ
ಕೊಟ್ಟರೆ, ರೈತನ ಮಗಳು ದಾರದ ತುಂಡು ಕೊಡ್ತಾಳೆ. ಆ
ದಾರದ ತುಂಡು ಕೊಟ್ಟರೆ ನಿಂಬೆ ಗಿಡ ಎಲೆ ಕೊಡುತ್ತದೆ. ಆ
ಎಲೆ ಕೊಟ್ಟರೆ ಹೊಳೆಯು ಹುಂಜಕ್ಕೆ ಕುಡಿಯಲು ನೀರು
ಕೊಡುತ್ತದೆ. ನೀವೀಗ ಸ್ವಲ್ಪ ರೊಟ್ಟಿ ಕೊಡಿ!" ಎಂದುದನ್ನು
ಮುಂದೆ ರೊಟ್ಟಿಯವರು "ಸೌದೆ ಕೊಡಿ" ಎಂದುದರೊಂದಿಗೆ
ಸೇರಿಸಿ ಎಲ್ಲವನ್ನೂ ಮರ ಕಡಿಯುವವರ ಹತ್ತಿರ ಹೇಳುತ್ತದೆ.
ಹೀಗೆಯೇ ಘಟನೆಗಳ ಪುನರಾವೃತ್ತಿಯಾಗುವದೂ ಉಂಟು.

ಸಾಮಾನ್ಯವಾಗಿ ಕಥೆಗಳನ್ನು ಗದ್ಯದಲ್ಲಿಯೇ ಹೇಳುವದು
ವಾಡಿಕೆಯಾದರೂ ಅಲ್ಲಲ್ಲಿ ಮಧ್ಯದಲ್ಲಿ ಕೆಲವು ಪದ್ಯಗಳು ಬರು
ತ್ತವೆ. ಗ್ರಿಮ್ ಸೋದರರು ಸಂಗ್ರಹಿಸಿದ ಕಥೆಗಳಲ್ಲಿ "ರಂಪಲ್
ಸ್ಟಿಲ್ಟ್ಸ್ಕಿನ್" ಎಂಬ ಕಥೆಯಿದೆ. ಅದರಲ್ಲಿ ಹಿಟ್ಟು ಮಾಡುವ
ವನೊಬ್ಬನ ಮಗಳು ಹುಲ್ಲನ್ನು ನೂಲು ತೆಗೆದು ಚಿನ್ನದ ಹಾರ
ಮಾಡಬೇಕೆಂದು ರಾಜನು ಅಪ್ಪಣೆ ಮಾಡುತ್ತಾನೆ. ರಂಪಲ್
ಸ್ಟಿಲ್ಟ್ಸ್ಕಿನ್‌ನು ಅವಳು ತನ್ನ ಮೊದಲ ಮಗುವನ್ನು ತನಗೇ
ಕೊಡಬೇಕೆಂದು ಹೇಳಿ ಅವಳಿಗೆ ಚಿನ್ನದ ದಾರ ಮಾಡಿ ಕೊಡು
ತ್ತಾನೆ. ಅವಳು ರಾಣಿಯಾದ ನಂತರ ತನ್ನ ಹೆಸರು ಹೇಳಿದರೆ
ನಿನ್ನ ಮಗುವನ್ನು ಕೊಡುವದು ಬೇಡವೆನ್ನುತ್ತಾನೆ. ಅಡವಿಯಲ್ಲಿ
ಆ ಕುಳ್ಳನು ಆನಂದದಿಂದ ಹೀಗೆ ಹಾಡುತ್ತಾನೆ; ಕುಣಿ
ಯುತ್ತಾನೆ:

ಇಂದು ರೊಟ್ಟಿ ಬೇಯಿಸುವೆ, ನಾಳೆ ಗಂಜಿ ಕೊಳಸುವೆ. ಮುಂದೆ ತರುಣರಾಣಿ ಕುವರಿಯನ್ನು ಮದುವೆಯಾಗುವೆ! ಇದುವೆ ನನ್ನ ಮೋಜು. ಆಹಾ ಹಹಹಹಾಹಹಾಹಹಾ! ರಂಪಲ್ ಸ್ಟಿಲ್ಟ್ಸ್‌ಕಿನ್ ನಾನು ಎಂದು ಯಾರು ಬಲ್ಲರು? ಜನರ ಗುಂಪಿನಲ್ಲಿ ಕಥಿತವಾಗುವ ಕಥಾನಕ (Anecdote) ಗಳು ಸತ್ಯ ಸಂಗತಿಯನ್ನುಳ್ಳ ಘಟನಗಳಾಗಿರಬಹುದು. ಅತಿ ಶಯೋಕ್ತಿಯನ್ನು ಬಳಸಿದ್ದಾಗಿರಬಹುದು; ನಂಬಲಸಾಧ್ಯವಾದ ಘಟನೆಗಳಿಂದ ಪೂರಿತವಾದದ್ದಾಗಿರಬಹುದು.

ವಿಶಿಷ್ಟವಾದ ಮತ್ತೊಂದು ಪ್ರಕಾರವು ಕಲ್ಪಿತ ನೀತಿ ಕಥೆ ಗಳದು. (Fable)ಪ್ರಸಿದ್ಧವಾದ ಉದಾಹರಣೆ ಈಸೋಪನ ನೀತಿ ಕಥೆಗಳು, ಬೌದ್ಧರ ಜಾತಕ ಕಥೆಗಳು. ಅವನ್ನು ನಂಬಬೇಕಿಲ್ಲ. ಆದರೆ ಅವುಗಳ ಅರ್ಥವನ್ನು ಗ್ರಹಿಸಬೇಕು. ರಾಜಕೀಯ ಜ್ಞಾನ ಅಥವಾ ನೈತಿಕ ವಿಷಯ ಪ್ರತಿಪಾದನೆ ಅವುಗಳಲ್ಲಿರಬಹುದು.

ಫಿನ್‌ಲಂಡದ ಎಂಟ್ಟಿ ಆರ್ನ ಎಂಬ ವಿದ್ವಾಂಸನು ೧೯೧೧ ರಲ್ಲಿ ಪ್ರಕಟಪಡಿಸಿದ ಜಾನಪದ ಕಥೆಗಳ ಪ್ರಕಾರಗಳು ವಿದ್ವಾಂಸ ರಿಂದ ಅಂಗೀಕೃತವಾಗಿವೆ. ಅವನು ಹೀಗೆ ವಿಭಾಗಮಾಡಿದ್ದರೂ ಒಂದೇ ಪ್ರಕಾರದ ಕಥೆಗಳಲ್ಲಿ ಇತರ ಪ್ರಕಾರಗಳ ಲಕ್ಷಣಗಳೂ ಸೇರಿಕೊಂಡಿರಬಹುದು; ಇವು ವಿಷಯದ ಅವಗಾಹನೆಯ ದೃಷ್ಟಿ ಯಿಂದ ಮಾಡಿಕೊಂಡ ಸ್ಥೂಲವಾದ ವಿಭಾಗಗಳು ಎಂಬುದನ್ನು ಮರೆತಿರಬಾರದು. ಅವನ್ನು ಸಂಕ್ಷಿಪ್ತವಾಗಿ ಇಲ್ಲಿ ಕೊಡಬಹುದು.

(i) ಪ್ರಾಣಿಗಳ ಕಥೆಗಳು; ಕಾಡು ಪ್ರಾಣಿಗಳು; ಕಾಡು ಪ್ರಾಣಿಗಳು ಮತ್ತು ಸಾಕು ಪ್ರಾಣಿಗಳು; ಮಾನವ ಹಾಗು

ಕಾಡು ಪ್ರಾಣಿಗಳು; ಸಾಕು ಪ್ರಾಣಿಗಳು; ಹಕ್ಕಿಗಳು; ಮೀನು ಗಳು; ಇತರ ಪ್ರಾಣಿಗಳು ಮತ್ತು ವಸ್ತುಗಳು.

(ii) ಸಾಮಾನ್ಯವಾದ ಜಾನಪದ ಕಥೆಗಳು

(ಅ) ಮಾಟದ ಕಥೆಗಳು

ಅತಿಮಾನುಷ ವಿರೋಧಿಗಳು; ಮಾಟದ ಪ್ರಭಾವಕ್ಕೆ ಒಳಗಾದ ಪತಿ (ಪತ್ನಿ); ಅಥವಾ ಇತರ ಸಂಬಂಧಿಗಳು: ಅಥವಾ ಅತಿಮಾನುಷ ಪತಿ, ಪತ್ನಿ ಇತ್ಯಾದಿ; ಅತಿಮಾನುಷ ಕಾರ್ಯ ಗಳು; ಅತಿಮಾನುಷ ಸಹಾಯಕರು: ಮಾಟದ ವಸ್ತುಗಳು; ಅತಿಮಾನುಷ ಶಕ್ತಿ ಅಥವಾ ಜ್ಞಾನ; ಅತಿಮಾನುಷವಾದ ಇತರ ಕಥೆಗಳು.

(ಬ) ಧಾರ್ಮಿಕ ಕಥೆಗಳು

(ಕ) ಕಾದಂಬರಿ (ಅದ್ಭುತರಮ್ಯ ಕಥೆಗಳು ರೊಮಾನ್ಸ್ Novelle)

(ಡ) ಮೂರ್ಖ ರಾಕ್ಷಸರ (Stupid ogre) ಕಥೆಗಳು

(iii) ಹಾಸ್ಯಗಳು (Jokes) ಹಾಗು ಇತರ ಕಥಾನಕ ಗಳು (Anecdotes); ಬಟಾಟೆ ಮಿದುಳಿನವರ (ಧಡ್ಡರ) ಕಥೆ ಗಳು: ವಿವಾಹಿತರ ಕುರಿತಾದ ಕಥೆಗಳು; ಹುಡುಗಿ ಅಥವಾ ಹೆಣ್ಣಿನ ಕಥೆಗಳು; ತರುಣನ ಅಥವಾ ಬಾಲಕನ ಕಥೆಗಳು; ಬುದ್ಧಿವಂತರ ಕಥೆಗಳು; ಭಾಗ್ಯದ ಆಕಸ್ಮಿಕಗಳು (Lucky accidents): ಮೂರ್ಖರ ಕಥೆಗಳು: ಸುಳ್ಳು ಹೇಳುವವರ ಕಥೆಗಳು.

ಈ ವಿಭಾಗಗಳಿಗೆ ಗಣನೀಯ ಪ್ರಮಾಣದ ಸಂಖ್ಯೆ ಯಲ್ಲಿದ್ದ ಸೋಮಾರಿಗಳ ಕಥೆಗಳ ವರ್ಗವೊಂದನ್ನು ಪ್ರತ್ಯೇಕ

ವಾಗಿ ಸೇರಿಸಬೇಕೆಂದು ನನಗೆ ಅನಿಸುತ್ತದೆ. ನಮ್ಮ ದೇಶದಲ್ಲಿ ಯುರೋಪಿನಲ್ಲಿಗಿಂತಲೂ ಈ ವರ್ಗೀಕರಣವು ಹೆಚ್ಚು ಅಗತ್ಯದ್ದಾಗಿದೆ.

## ೪. ಜಾನಪದ ಕಥೆಗಳ ವಿಚಿತ್ರ ಪ್ರಪಂಚ

ಈ ಜಾನಪದ ಕಥಾಪ್ರಪಂಚದಲ್ಲಿ ತಿರುಗಾಡುವ, ನಿದ್ದೆ ಮಾಡುವ, ಮಾತಾಡುವ, ಕೆಲಸಮಾಡುವ ಪಾತ್ರಗಳು ಹಲವು ವೇಳೆ ಬಹು ವಿಚಿತ್ರವಾದ ರೀತಿಯವು. ಇಲ್ಲಿ ಘೋರಾಕಾರ ವಾದ ಭೂತಗಳು ಬರಬಹುದು. ಅರೇಬಿಯನ್ ನ್ಯಾಟ್ಸ್‌ನ ಕಥೆಯಲ್ಲಿಯಂತೆ ಸುಂದರಿಯನ್ನು ಅಪಹರಿಸಬಹುದು. ಮೀನು ಗಾರ ಮತ್ತು ಭೂತದ ಕಥೆಯಲ್ಲಿ ಸೌತೆಕಾಯಿ ಆಕಾರದ ದೊಡ್ಡ ತಾಮ್ರದ ಪಾತ್ರೆಯಿಂದ ಮುಚ್ಚಲು ತೆರೆದ ಕೂಡಲೆ ಹೊಗೆಯು ಆಕಾರದಲ್ಲಿ ಹೊರ ಬಿದ್ದು ನೋಡನೋಡುತ್ತಲೆ ಬೆಳೆದು ಆಕಾಶಕ್ಕೆ ವ್ಯಾಪಿಸಿದ ಮರೀದ ಭೂತವುಂಟು; ಹಾಗೆಯೇ ಅದು ಚಿಕ್ಕದಾಗಿಯೂ ಬಾಟಲಿಯಲ್ಲಿ ಸೇರಿಕೊಂಡಿತು.

ಹೆಂಡತಿಯ ಮಾಟದಿಂದ ಹೊಕ್ಕಳಿನ ಭಾಗದ ಕೆಳಗೆ ಕಲ್ಲಾಗಿಬಿಡುತ್ತಾನೆ ಒಬ್ಬನು. ಮಾಟದಿಂದ ಮೀನುಗಳಾಗಿ ಪರಿವರ್ತಿತರಾಗುತ್ತಾರೆ ಮನುಷ್ಯರು. ಮೀನುಗಳಾಗಿದ್ದಾಗಲೂ ಮಾತನಾಡಬಲ್ಲರು.

ಇಲ್ಲಿಯ ಸಂಪತ್ತು - ಮುತ್ತುರತ್ನಾದಿಗಳು ಹೇರಳವಾಗಿವೆ. ಕರಿಯ ಮರದ ಕೀಲುಕುದುರೆ ಕೀಲು ತಿರುಗಿಸು

ವವರೊಳಗೆ ಆಕಾಶಕ್ಕೆ ಹಾರಿಹೋಗುತ್ತದೆ. ಬೆಳ್ಳಿಯ ಬೋಗು ಣಿಯ ಮಧ್ಯದಲ್ಲಿ ಚಿನ್ನದ ನವಿಲು. ಅದರ ಸುತ್ತಲೂ ಬಂಗಾರದ ಇಪ್ಪತ್ತುನಾಲ್ಕು ಮರಿಗಳು. ತಾಸಿಗೊಮ್ಮೆ ಒಂದೊಂದು ಮರಿ ಯನ್ನು ಕೊಕ್ಕಿನಿಂದ ಕುಕ್ಕಿ ರೆಕ್ಕೆ ಬಡಿದು ಕೂಗುತ್ತದೆ ಆ ನವಿಲು. ತಿಂಗಳು ಪೂರ್ತಿಯಾದಾಗ ಬಾಯಿ ತೆರೆಯುತ್ತದೆ. ಆಗ ಬಾಯಲ್ಲಿ ಅರ್ಧಚಂದ್ರಾಕಾರದ ಚಿನ್ನದ ತಗಡು ಕಾಣುತ್ತದೆ.

ಸುವರ್ಣ ರಚಿತವಾಗಿ ರತ್ನ ಖಚಿತವಾದ ಮಾನವ ಮೂರ್ತಿ ಪುರುಷ ಪ್ರಮಾಣದಲ್ಲಿದೆ. ಅದರ ಕೈಯಲ್ಲೊಂದು ಚಿನ್ನದ ತುತ್ತೂರಿ. ನಗರದ ಕಾವಲಾಗಿರುವದು ಆ ಮೂರ್ತಿ. ಕೋಟೆಯೊಳಗೆ ಶತ್ರು ಪ್ರವೇಶಿಸಿದರೆ ಅದು ತುತ್ತೂರಿಯನ್ನು ಊದುವದು. ಅದರ ಸಪ್ಪಳವನ್ನು ಕೇಳಿ ನಿಶ್ಚೇತನನಾಗಿ ನೆಲಕ್ಕುರುಳಿ ಶತ್ರು ಸತ್ತುಹೋಗುವನು.

ನಾವಿಕ ಸಿಂದಬಾದನ ಕಥೆಯಲ್ಲಿ ಸಮುದ್ರದೊಳಗಿನಿಂದ ಒಂದು ಗಂಡು ಕುದುರೆ ಹೊರಬಿದ್ದು ಹೆಣ್ಣು ಕುದುರೆಯ ಬಳಿ ಬರುತ್ತದೆ.

ಆನೆಗಳನ್ನು ಕಾಲುಗಳಿಂದ ಎತ್ತಿ ಒಯ್ಯಬಲ್ಲ ಬಹುದೊಡ್ಡ ರೂಖಪಕ್ಷಿ ವಜ್ರದ ಗಣಿಯಲ್ಲಿ ಒಂದು ಹಾವನ್ನೆತ್ತಿಕೊಂಡು ಹೋಗುತ್ತದೆ. ಅಲ್ಲಿ ಕಪಿಗಳನ್ನು ಹೋಲುವ ಕ್ರೂರ ಮಾನವರು ಸಮುದ್ರ ತೀರದಲ್ಲಿದ್ದರು.

ಅಲ್ಲಾವುದ್ದೀನನ ಕಥೆಯಲ್ಲಿ ಮಾಟಗಾರನು ಅವನನ್ನು ಗವಿಯಲ್ಲಿ ಸೇರಿಸಿ ಬಾಗಿಲು ಹಾಕುತ್ತಾನೆ. "ಸೆಸೇಮ್, ಬಾಗಿಲು ತೆರೆ" ಎಂದಾಗ ಬಂಡೆ ಬಾಗಿಲಿಂದ ತೆರೆಯಲಾಗುತ್ತದೆ. ಮಾಯಾ ದೀಪ ಅಲ್ಲಿ ಅವನಿಗೆ ದೊರೆಯುತ್ತದೆ. ಇಟ್ಟಿಸಿದ್ದನ್ನು ಸಿಮಾಣ

ಮಾಡುವ ಶಕ್ತಿಯೂ ಆ ದೀಪದ ಭೂತಕ್ಕೆ ಇದೆ. ಅದು ದೀಪ ಇದ್ದವರ ಸ್ವಾಧೀನ.

ಮಾಯಾ ಉಂಗುರವೂ ಅದ್ಭುತ ಪವಾಡ ಮಾಡುತ್ತದೆ. ಬಣ್ಣಗಾರ ಅಬೂಬಕರ್ ಕಥೆಯಲ್ಲಿ ರಾಜನು ಅದನ್ನು ಬೀಸುವದರೊಳಗೆ ಶತ್ರುವಿನ ಕುತ್ತಿಗೆ ಕಡಿದು ಹೋಗುತ್ತದೆ.

"ಎತ್ತಿನ ಕೊಂಬು" (ದೇಶಾಂತರ ಕಥೆಗಳು) ಎಂಬ ಕಥೆಯಲ್ಲಿ ಒಂದು ಎತ್ತು ಇನ್ನೊಂದು ಎತ್ತಿನೊಡನೆ ಹೋರಾಡಿ ಮರಣ ಹೊಂದುತ್ತದೆ. ಒಬ್ಬ ಹುಡುಗನು ಅದರ ಕೊಂಬು ಬಡಿದರೆ ಆಹಾರ ದೊರೆಯುತ್ತಿದ್ದುದರಿಂದ ಅದನ್ನು ಸಂಗ್ರಹಿಸಿಟ್ಟುಕೊಂಡನು. ಮತ್ತೊಬ್ಬ ಬೇರೊಂದು ಕೊಂಬನ್ನಿಟ್ಟು ಅದನ್ನು ಕದ್ದನು. ಆಗ ಎರಡನೆಯ ಕೊಂಬನ್ನು ಹೊಡೆಯಲು ಒಂದು ಭೂತ "ಆಹಾರ ಕೊಡು" ಎಂದು ಅರ್ಭಟಿಸಿತು. 'ಮೊದಲನೆ ಕೊಂಬಿನ ಕಳ್ಳನನ್ನು ತಿಂದು ಹಾಕು" ಎಂದನು ಹುಡುಗ. ಹಾಗೆಯೇ ಮಾಡಿ ಆ ಕೊಂಬನ್ನು ತಂದಿತು ಭೂತ. ಅದು ಎತ್ತು ಕೊಂದ ಮತ್ತೊಂದೆತ್ತಿನ ಭೂತವಾಗಿತ್ತು.

ಒಕ್ಕಣ್ಣಿನ ರಾಕ್ಷಸರು, ಇಕ್ಕಣ್ಣಿನ ರಾಕ್ಷಸರು, ಮೂರು ಕಣ್ಣಿನ ರಾಕ್ಷಸರು ಕೂಡ ಯಕ್ಷಿಣಿ ಕಥೆಗಳಲ್ಲಿ ಬರುವದುಂಟು.

ಎರಡು ಕಣ್ಣುಗಳುಳ್ಳ ಹುಡುಗಿಯ ಅಕ್ಕಂದಿರಲ್ಲಿ ಒಬ್ಬಳಿಗೆ ಒಂದು ಕಣ್ಣು, ಇನ್ನೊಬ್ಬಳಿಗೆ ಮೂರು ಕಣ್ಣು ಉಂಟು.

ಬೃಹದಾಕಾರದ ರಾಕ್ಷಸರು ನಿದ್ರೆಯಲ್ಲಿ ಗೊರಕೆ ಹೊಡೆದರೆ ಎಲೆಗಳು ಮಾತ್ರವಲ್ಲ, ಮರದ ಟೊಂಗೆಗಳೂ ಮೇಲೆ ಕೆಳಗೆ ಆಗುತ್ತಿದ್ದವು. ರಾಜಕುಮಾರಿಯ ಬದಲಿಗೆ ರಾಜನು ಕೊಟ್ಟ ಟನ್ನುಗಟ್ಟಲೆ ಬಂಗಾರವನ್ನು ಆರು ಜನ ಸಾಹಸಿಗಳು ಒಯ್ಯು

ತ್ತಿದ್ದಾಗ ರಾಜನು ಅದನ್ನು ವಶಪಡಿಸಿಕೊಳ್ಳಲು ಎರಡು ರೆಜಿಮೆಂಟ್ ಸೈನ್ಯವನ್ನು ಕಳಿಸಿದನು. ಆಗ ಒಬ್ಬನು ಮೂಗಿನ ಒಂದು ಸೊರಳೆಯಿಂದ ಗಾಳಿಯನ್ನು ಊದಲು ಎರಡು ರೆಜಿಮೆಂಟಿನ ಸೈನ್ಯದವರೂ ತರಗೆಲೆಗಳಂತೆ ಹಾರಿಹೋದರು.

"ಮಾನವ ಕುಮಾರಿ" ಎಂಬ ವ್ರಜದೇಶದ ಒಂದು ಕಥೆಯಲ್ಲಿ ಸನ್ಯಾಸಿಯ ಪ್ರಭಾವದಿಂದ ನಾಯಿಯ ಮರಿ, ಕತ್ತೆಯ ಮರಿ ಹಾಗು ಹಂದಿಯ ಮರಿಗಳು ಹುಡುಗಿಯರಾಗಿ ಪರಿವರ್ತಿತರಾಗುತ್ತಾರೆ. ಆದರೂ ತಮ್ಮ ಮೊದಲಿನ ಜನ್ಮದ ಸ್ವಭಾವವು ಅವರಲ್ಲಿರುತ್ತದೆ.

ದೈತ್ಯರು ಬೇಕಾದ ರೂಪವನ್ನು ಧರಿಸಬಲ್ಲರು. ಜ್ವಲಿತ ಲೋಚನನೆಂಬ ದೈತ್ಯನು ಹಂದಿಯ ರೂಪವನ್ನು ಧರಿಸಿದ್ದನು. ಶಾಪದಿಂದ ಪೂರ್ವರೂಪ ಹೋಗಿ ವಿದ್ಯಾಧರಿಯರು ಕನಕಪುರದಿಂದ ಕೆಳಗೆ ಬಿದ್ದರು. ಶಾಪಮುಕ್ತಿಯಾದ ಮೇಲೆ ಪೂರ್ವರೂಪ ಪಡೆದರು.

"ಸರ್ಪರಾಜನ ಕಥೆ"ಯಲ್ಲಿ ಒಬ್ಬ ರಾಣಿಯು ಸರ್ಪವನ್ನು ಹಡೆಯುತ್ತಾಳೆ. ಆ ಸರ್ಪವು ಮಾತನಾಡಬಲ್ಲುದು. ತನಗೆ "ಚೌಲ ಮಾಡಿರಿ, ಮುಂಜಿ ಮಾಡಿರಿ, ಮದುವೆ ಮಾಡಿರಿ," ಎಂದು ಹೇಳಬಲ್ಲುದು. ಇವನ್ನೆಲ್ಲ ಮಾಡಲು ಅದು ತನ್ನ ಮೊದಲ ಹೆಂಡತಿಯನ್ನು ಕಚ್ಚಿ ಕೊಂದು ಬಿಟ್ಟಿತು. ಕೊನೆಗೆ ಸರ್ಪವು ರಾಜಕುಮಾರನಾಗುವದು.

ಕಾಪಾಲಿಕರೂ, ಮಾಂತ್ರಿಕರೂ ತಮಗೆ ಕಾಳಿಕಾದೇವಿಯು ಒಲಿಯಬೇಕೆಂದು ನರಬಲಿಗಳನ್ನು ಕೊಡುತ್ತಾರೆ.

ನರಬಲಿ ಕೊಟ್ಟವರಿಗೆ ಕಾಳಿಕಾದೇವಿ ಪ್ರತ್ಯಕ್ಷಳಾಗಿ ಇಷ್ಟಾರ್ಥ ಸಿದ್ಧಿಯನ್ನು ಕರುಣಿಸುತ್ತಾಳೆ.

ಗ್ರಿಮ್ ಸೋದರರ ಕಥೆಗಳಲ್ಲಿ ದೆವ್ವಕ್ಕೆ ಬಾಲವೂ, ಎರಡು ಕೋಡುಗಳೂ ಉಂಟು. ಚಿನ್ನದ ಕೂದಲು ಉಂಟು.

ರಾಜನ ಹಿರಿಯ ರಾಣಿಯು ಮಕ್ಕಳನ್ನು ಮಾಟದಿಂದ ಪಕ್ಕಿಗಳನ್ನಾಗಿ ಪರಿವರ್ತಿಸುವ ಮಾಟಗಾತಿಯರು ಕಂಡು ಬರುವರು. ಒಂದು ಕಥೆಯಲ್ಲಿ ("ಆರು ಹಂಸಗಳು") ತೀರ ಕಿರಿಯ ರಾಜಕುಮಾರಿ ಆರು ವರ್ಷ ಮೌನದಲ್ಲಿದ್ದು ನಂತರ ಆರು ಹಂಸಗಳು ಮನುಷ್ಯರಾಗುವಂಥ ಅಂಗಿಯನ್ನು ಹೆಣೆದು ಅವರನ್ನು ರಾಜಕುಮಾರರನ್ನಾಗಿ ಪರಿವರ್ತಿಸುತ್ತಾಳೆ.

ಚಿನ್ನದ ಹಕ್ಕಿ ಚಿನ್ನದ ಸೇಬು ಹಣ್ಣುಗಳನ್ನು ಕಚ್ಚಿಕೊಂಡು ಹೋಗುತ್ತದೆ. ಚಿನ್ನದ ಪಂಜರದಲ್ಲಿಟ್ಟ ಕೂಡಲೆ ಅದು ಕಿರುದನಿಯಿಂದ ಕೂಗಿ ಸೇವಕರನ್ನು ಎಚ್ಚರಿಸುತ್ತದೆ. ಚಿನ್ನದ ಕುದುರೆಗೆ ಚಿನ್ನದ ಜೀನು ಹಾಕಿದ ಕೂಡಲೆ ಅದು ಕೆನೆಯುತ್ತದೆ. ಚಿನ್ನದ ಹಕ್ಕಿಯನ್ನು ಸಂಪಾದಿಸುವದಕ್ಕೆ ಸಲಹೆ ನೀಡಿ ಸಹಾಯ ಮಾಡಿದ ನರಿಯು ಹೇಳಿಕೆಯಂತೆ ರಾಜಕುಮಾರನು ಅದನ್ನು ಸೀಳಲು ಆ ನರಿಯು ರಾಜಕುಮಾರನಾಗಿ ಪರಿವರ್ತಿತವಾಗುತ್ತದೆ. ಮಾಟದಿಂದ ರಾಜಕುಮಾರಿಯ ಅಣ್ಣ ನರಿಯಾಗಿದ್ದನು.

'ಸಿಂಡರೆಲ'ಳಂಥ ಸುಸ್ವಭಾವದ ಸುಂದರಿಗೆ ಯಕ್ಷಿಣಿಯ ನೆರವು ದೊರೆತು ಅವಳು ರಾಜಕುಮಾರನನ್ನು ಮದುವೆಯಾಗಲು ಸಾಧ್ಯವಾಗುತ್ತದೆ.

ಅನೇಕ ಅಪ್ಸರೆಯರು ಭೂಮಿಗೆ ಇಳಿದು ಬಂದು ಮಾನವರನ್ನು ಮದುವೆಯಾದ ಅನೇಕ ಸುಂದರ ಕಥೆಗಳಿವೆ.

## ಟೀಸಕುನ್‌ಲುನ್ ಕಥೆ

ಆರ್ಥರ ವೇಲಿಯುವರು ಭಾಷಾಂತರಿಸಿದ ಟುನ್ ಹುವಾಂಗ ಎಂಬ ಒಂಬತ್ತನೆಯ ಶತಕದ ಕವಿಯ "ಲಾವಣೆಗಳು ಮತ್ತು ಕಥೆಗಳು" ಎಂಬ ಗ್ರಂಥದಲ್ಲಿ "ಟೀನ್‌ಕುನ್‌ಲುನ್" ಎಂಬ ಸುಂದರವಾದ ಕಥೆಯಿದೆ.

ಟೀನ್‌ಕುನ್‌ಲುನ್ ಎಂಬವನು ಮದುವೆಯಾಗಲಾರದಷ್ಟು ಬಡವನಾಗಿದ್ದನು. ಒಂದು ದಿನ ಮೂವರು ಅಪ್ಸರ ಸಹೋದರಿಯರು ಅವನ ಕೊಳಕ್ಕೆ ಮೀಯಲು ಬಂದರು. ಅವರು ಜಲಕೇಳಿಯಾಡುತ್ತಿದ್ದಾಗ ಕುನ್‌ಲುನ್ ಅವರನ್ನು ನೋಡಿದನು. ಆಗ ಇಬ್ಬರು ಅಪ್ಸರೆಯರು ತಮ್ಮ ನಿಲುವಂಗಿಗಳನ್ನು ತೆಗೆದುಕೊಂಡು ಬಕಪಕ್ಷಿಗಳಾಗಿ ಆಕಾಶದಲ್ಲಿ ಹಾರಿಹೋದರು. ಮೂರನೆಯವಳ ನಿಲುವಂಗಿಯನ್ನು ಕುನಲುನ್ ವಶಪಡಿಸಿಕೊಂಡನು. ಆಗ ಆ ಅಪ್ಸರೆಯು "ನನಗೆ ನನ್ನ ನಿಲುವಂಗಿಯನ್ನು ಕೊಡು. ವಿವಸ್ತ್ರಳಾಗಿ ಹೊರಗೆ ಬರಲಾರೆನು; ಅದನ್ನು ಕೊಟ್ಟರೆ ನಿನ್ನನ್ನು ಮದುವೆಯಾಗುವೆನು" ಎಂದಳು. ಆದರೆ ಅವಳು ಎಷ್ಟು ಒತ್ತಾಯ ಮಾಡಿದರೂ ನಿಲುವಂಗಿಯನ್ನು ಕೊಟ್ಟರೆ ಅವಳು ಹಾರಿ ಹೋಗುವಳೆಂದು ತಿಳಿದು ಅದನ್ನು ಕೊಡದೆ ತನ್ನ ಶರ್ಟನ್ನು ಕೊಟ್ಟನು. ಅವನ ಶರ್ಟನ್ನು ಧರಿಸಿಕೊಂಡು ಅವಳು ಅವನೊಡನೆ ಬಂದು ಅವನನ್ನು ಮದುವೆಯಾದಳು. ಅವಳಿಗೆ ಒಬ್ಬ ಮಗನು ಜನಿಸಿದನು.

ಐದು ವರ್ಷಗಳ ನಂತರ ಅವಳ ಗಂಡನು ಪಶ್ಚಿಮ ದೇಶದ ಪ್ರದೇಶಕ್ಕೆ ನೌಕರಿಗಾಗಿ ಹೋಗಿದ್ದು ಮೂರು ವರ್ಷಗಳಾದುದರಿಂದ ಅವಳು ತನ್ನ ನಿಲುವಂಗಿಯನ್ನು ಸಂಪಾದಿಸಿಕೊಂಡು ಆಕಾಶಕ್ಕೆ ಹಾರಿಹೋಗಬೇಕೆಂದು ತವಕಪಡುತ್ತಿದ್ದಳು.

ಕುನಲುನ್ ಹೋಗುವಾಗ ನಿಲುವಂಗಿಯನ್ನು ಭದ್ರವಾಗಿ ತಾಯಿಯು ಮಲಗುವ ಕೋಣೆಯಲ್ಲಿ ಹುಗಿದಿಟ್ಟು ಅದನ್ನು ಜೋಪಾನ ಮಾಡಬೇಕೆಂದೂ ಅಪ್ಸರೆಗೆ ಕೊಡಕೂಡದೆಂದೂ ತಾಯಿಗೆ ಹೇಳಿಹೋಗಿದ್ದನು.

ಆ ತಾಯಿಯು ಕೊಡದಿದ್ದರೂ ಮತ್ತೊಮ್ಮೆ ಅಪ್ಸರೆಯು ಅತ್ತೆಯನ್ನು ನಂಬಿಸಿ ತಾನು ಹಾರಿಹೋಗುವದಿಲ್ಲವೆಂದು ಪುಸಲಾಯಿಸಿ ನಿಲುವಂಗಿಯನ್ನು ಧರಿಸಿಕೊಂಡು ಸ್ವರ್ಗಕ್ಕೆ ಹಾರಿಹೋದಳು. ಅವಳು ಅಕ್ಕಂದಿರೊಡನೆ ಮತ್ತೊಮ್ಮೆ ಆ ಕೊಳಕ್ಕೆ ಬಂದು ಮಗನನ್ನು ಎತ್ತಿಕೊಂಡು ಹಾರಿಹೋದಳು. ಅವಳ ಮಗು ಟೀನಚಾಂಗನಿಗೆ ಅವಳ ತಂದೆಯಾದ ದೇವರಾಜನು ಎಲ್ಲ ಶಾಸ್ತ್ರಗಳನ್ನು ಕಲಿಸಿ ಪರಿಣತನನ್ನಾಗಿ ಮಾಡಿದನು.

ಟೀನಚಾಂಗನು ಮರಳಿ ಒಂದು ಬಾದಶಹನ ನೌಕರಿಯಲ್ಲಿ ಇದ್ದನು. ಅವನೊಮ್ಮೆ ಆತನ ಆಗ್ರಹಕ್ಕೆ ಗುರಿಯಾಗಿ ವನವಾಸಕ್ಕೆ ಕಳಿಸಲ್ಪಟ್ಟನು.

ಆ ಬಾದಶಹನ ರಾಜ್ಯದಲ್ಲಿ ಕೆಲವು ವಿಚಿತ್ರ ಘಟನೆಗಳು ಸಂಭವಿಸಿದವು. ಒಂದು ಬಕಪಕ್ಷಿಯ ಕತ್ತನ್ನು ಕತ್ತರಿಸಿದಾಗ ಮೂರು ಇಂಚು ಎರಡು ಗೆರೆ ಎತ್ತರವಾದ ಶಿರಸ್ತ್ರಾಣ ಧರಿಸಿದ ಶಿಶು ಹೊರಗೆ ಬಿದ್ದಿತು. ಅದು ಅಡಿಗೆಯವನಿಗೆ ಬಯ್ಗುಳ ಮಳೆ

ಕರೆಯಿತು. ಬಾದಶಹನ ಮಂತ್ರಿಗಳಿಗೆ ಈ ಬಹು ಚಿಕ್ಕ ಮಾನವನ ರಹಸ್ಯವನ್ನು ಭೇದಿಸಲಾಗಲಿಲ್ಲ.

ಅಡವಿಯಲ್ಲಿ ಮೂರು ಇಂಚು ಎರಡು ಗೆರೆ ಉಳ್ಳ ಹಲ್ಲು ಒಂದು ಸಿಕ್ಕಿತು. ಬಾದಶಹನು ಈ ಎರಡು ರಹಸ್ಯಗಳನ್ನು ಭೇದಿಸಿದವನಿಗೆ ಸಾವಿರ ಚಿನ್ನದ ನಾಣ್ಯಗಳನ್ನು ಕೊಡುವದಾಗಿಯೂ ಹತ್ತು ಸಾವಿರ ಮನೆಗಳ ಮೇಲ್ವಿಚಾರಣೆಯ ಅಧಿಕಾರ ಕೊಡುವದಾಗಿಯೂ ಡಂಗುರ ಹೊಡೆಸಿದನು.

ಟೀನಚಾಂಗನನ್ನು ಕರೆಸಲು ಅವನು ಅಡವಿಯಲ್ಲಿ ಕೂಯಿನ್ ಎಂಬ ರಾಕ್ಷಸನು ಯುದ್ಧಮಾಡುವಾಗ ಅವನ ಮುಂದಿನ ಹಲ್ಲು ಉದುರಿಬಿದ್ದಿತೆಂದೂ ಅದು ಪತ್ತೆಯಾಗಿರಲಿಲ್ಲವೆಂದೂ ತಿಳಿಸಿದನು.

"ಕುಳ್ಳ ಮನುಷ್ಯನಾದ ಲೀತ್ಸೂಆಪ್ರೋ ಎಂಬವನು ಶಿರಸ್ತ್ರಾಣ ಧರಿಸಿದ ಹುಡುಗನು, ಮೂರು ಇಂಚು ಎರಡುಗೆರೆ ಉದ್ದವಿದ್ದನು. ಅವನನ್ನು ಒಂದು ಬಕಪಕ್ಷಿಯು ನುಂಗಿತ್ತು" ಎಂದು ವಿವರಿಸಿ ಅರಸನಿಂದ ಸನ್ಮಾನಿತನಾದನು. ಈ ಕಥೆಯು ಮಾನವನ ಆಸೆಗಳು ರಚಿಸುವ ಸುಂದರ ಸ್ವಪ್ನಗಳನ್ನೂ ವಿಚಿತ್ರ ಕಲ್ಪನೆಗಳನ್ನೂ ಚಮತ್ಕಾರವಾಗಿ ನಿರೂಪಿಸಿದೆ.

## ೫. ಜಾನಪದ ಕಥೆಗಳಲ್ಲಿ ವಾಸ್ತವಿಕತೆ

ಜಾನಪದ ಕಥೆಗಳಲ್ಲಿ ಎಷ್ಟೇ ಅವಾಸ್ತವ ವ್ಯಕ್ತಿಗಳು, ಘಟನೆಗಳು ಇದ್ದರೂ ನಾವು ಜನರ ನಂಬಿಕೆಗಳು,

ಸಂಸ್ಕಾರಗಳು, ಸಾಮಾಜಿಕ ಪದ್ಧತಿಗಳು, ಧಾರ್ಮಿಕ ಸಂಪ್ರದಾಯಗಳು ಮೊದಲಾದವನ್ನು ಇದಿರುಗೊಳ್ಳುತ್ತೇವೆ.

ತಲೆತಲಾಂತರದಿಂದ ರಾಜಸತ್ತೆಯ ನೆರಳಿನಲ್ಲಿ (ಒಮ್ಮೊಮ್ಮೆ ಕರಿ ನೆರಳಿನಲ್ಲಿ) ಬದುಕಿ, ಮರಣಹೊಂದುತ್ತ ಬಂದ ಜನತೆಯಲ್ಲಿ ರಾಜಸತ್ತೆಯ ಪ್ರಾಬಲ್ಯವು ರಕ್ತಗತವಾಗಿದೆ ಎಂಬುದನ್ನು ನಾವು ನೋಡುತ್ತೇವೆ. ಬಹಳಷ್ಟು ಕಥೆಗಳಲ್ಲಿ ರಾಜಕೀಯ ವಿಷಯದ ಉಲ್ಲೇಖವು ಬಂದರೆ ಅದು ರಾಜಸತ್ತೆಯದೇ ಹೊರತು ಪ್ರಜಾಸತ್ತೆಯದಲ್ಲ. ರಾಜನು ಒಳ್ಳೆಯವನಾದರೆ ಅವನನ್ನು ಹಾಡಿ ಹರಸುವದು, ಕೆಟ್ಟವನಾದರೆ ಅವನನ್ನು ಪದಚ್ಯುತಗೊಳಿಸಿ ಅಥವಾ ಕೊಂದು ಇನ್ನೊಬ್ಬ ರಾಜನನ್ನು ಸ್ಥಾಪಿಸುವದು, ಇದು ಈ ಕಥೆಗಳಲ್ಲಿ ನಡೆಯುವ ಸಾಮಾನ್ಯ ಪ್ರಕಾರ. ಇದು ರಾಜಸತ್ತೆಯ ಪ್ರಾಬಲ್ಯವಿದ್ದ ಕಾಲದ ಕಥೆಗಳ ಜೀವನಚಿತ್ರವಾಗಿದೆ.

ಜನರು ದೈವಭಕ್ತರಾಗಿರುತ್ತಿದ್ದರು. ಆಯಾ ಜನಾಂಗದ ಕಥೆಗಳನ್ನು ಓದಿದಲ್ಲಿ ಸಾಮಾನ್ಯವಾಗಿ ಅಲ್ಲಿಯ ಧಾರ್ಮಿಕ ವಾತಾವರಣವೇ ರೂಪುಗೊಂಡಿರುವದನ್ನು ಅರಿಯುತ್ತೇವೆ. ಗ್ರಿಮ್ ಸೋದರರು ಸಂಗ್ರಹಿಸಿದ ಕಥೆಗಳಲ್ಲಿ ಕ್ರಿಶ್ಚನ್ ಧರ್ಮದ ವಾತಾವರಣವೂ ತತ್ವಗಳೂ ಎದ್ದು ಕಾಣುತ್ತವೆ. "ಹನ್ನೆರಡು ಜನ ಪುರೋಹಿತರು" ಎಂಬ ಕಥೆಯನ್ನು ನೋಡಬಹುದು. ಸೇಂಟ್ ಪೀಟರನೂ, ಇತರ ಪಾದ್ರಿಗಳೂ ಉದ್ಧಾರಕನನ್ನರಸುತ್ತಿದ್ದರು. ಅವರು ಮುನ್ನೂರು ವರ್ಷ ನಿದ್ರಿಸುವಂತೆ ದೇವ-ದೂತರು ಮಾಡಿದರು. ಉದ್ಧಾರಕ ಯೇಸು ಕ್ರಿಸ್ತನು ಹುಟ್ಟಿದ ರಾತ್ರಿ ಅವರು ಎಚ್ಚತ್ತರು ಎಂಬುದೆ ಆ ಕಥೆ. ಕೋಡುಗಳು

ಬಾಲವುಳ್ಳ ಸೈತಾನ (ದೆವ್ವ) ಕ್ರಿಶ್ಚನ್ನರ ಸಂಜ್ಞೆಯದೇ ಆಗಿದೆ.
ಚರ್ಚಿನ ಹತ್ತಿರ ಇದ್ದ ಮೂರು ಕಪ್ಪು ರಸವನ್ನು ಕುಡಿದಾಗಲೇ
ಬೇಟೆಗಾರನಿಗೆ ಏಳು ಹೆಡೆಗಳುಳ್ಳ ಘಟಸರ್ಪವನ್ನು ಕೊಲ್ಲುವ
ಚೈತನ್ಯ ಬರುತ್ತದೆ. "ಒಡತನ ಹಾಗು ನಮ್ರತೆ" ಎಂಬ ಕಥೆ
ಯಲ್ಲಿ ಕ್ರಿಶ್ಚನ್ ಧರ್ಮದಲ್ಲಿ ಈ ಗುಣಗಳಿಗೆ ಕೊಟ್ಟ ಮಹತ್ತ್ವ
ವನ್ನು ಕಥೆಯಲ್ಲಿ ಮನಗಾಣಿಸಲಾಗಿದೆ.

ಯುರೋಪಿನಲ್ಲಿಯೂ ಮಾಟಗಾರರು ಹಾಗು ಮಾಟ-
ಗಾತಿಯರಾದ ಮುದುಕಿಯರು ಅನೇಕ ರೀತಿಯ ಮಾಟಗಳಲ್ಲಿ
ತೊಡಗಿರುತ್ತಿದ್ದರು. ಅನೇಕರನ್ನು ಮಾಟಗಾತಿಯರೆಂಬ
ಆರೋಪದಿಂದ ಜೀವಂತ ಸುಡಿಸುತ್ತಿದ್ದರು. ಆ ಮಾಟಗಾರ
ಮಾಟಗಾತಿಯರ ದುಷ್ಟತನದ ಚಿತ್ರಣವು ಅನೇಕ ಕಥೆಗಳಲ್ಲಿ
ಬಂದಿದೆ. ಆ ಮಾಟಗಾತಿಯರು ಮಂತ್ರಿಸಿದ ಎಲುಬುಗಳನ್ನು
ಉಪಯೋಗಿಸುವದೂ ಮಾಟಗಾತಿ ಬಾಬಾಯಾಗಾಳು ಮನೆ
ಮೇಲೆಲ್ಲ ತಲೆಬುರುಡೆಗಳನ್ನು ನೇತುಹಾಕಿದುದೂ ವಾಸ್ತ
ವಿಕ ಸಂಗತಿಗಳ ವರ್ಣನೆಗಳೇ ಆಗಿವೆ. ಮಾಟಗಾತಿಯರ
ಮಾಟದ ಪರಿಣಾಮ ಹೇಗೇ ಇರಲಿ, ಅವರ ಕಾರ್ಯಪದ್ಧತಿ
ಯನ್ನು ಇಂಥ ಕಥೆಗಳಲ್ಲಿ ಅರಿಯಬಹುದು. ಹಾಗೆಯೇ ಮಂತ್ರದ
ಉಂಗುರ, ತಾಯಿತ, ಭೂತಪಿಶಾಚಿಗಳು, ಸಪ್ತಮೇಲಿನ
ಲೋಕಗಳ ಕಲ್ಪನೆ, ಮತ್ತು ಚಿನ್ನದ ಪಕ್ಷಿ ಇತ್ಯಾದಿ ಕಲ್ಪನೆಗಳ
ಹಿಂದಿನ ಮನೋಭಾವಗಳ ಆಸೆಗಳೂ ಭಯವೂ ವಾಸ್ತವಿಕ
ವಾಗಿವೆಯೆಂದು ಊಹಿಸುವದು ಕಷ್ಟವಲ್ಲ.

"ಅರೇಬಿಯನ್ ನೈಟ್ಸ್" ಕಥೆಗಳಲ್ಲಿ ಬರುವ ಅನೇ
ಅವಾಸ್ತವ ಘಟನೆಗಳಿಗೂ ಸ್ವಲ್ಪ ವಾಸ್ತವಿಕದ ತಳಹ

ಯಿದೆ. ಅಲ್ಲಿನ ರೂಖಪಕ್ಷಿ (ಚೀನೀಯರಲ್ಲಿಯೂ ಈ ದೊಡ್ಡ ಪಕ್ಷಿಗಳ ಉಲ್ಲೇಖ ಒಂಬತ್ತನೆಯ ಶತಕದ ಗ್ರಂಥದಲ್ಲಿ ಕಾಣು ತ್ತದೆ) ಆನೆಗಳನ್ನು ಹೊತ್ತುಕೊಂಡು ಹೋಗುವದು; ತೀರ ಪ್ರಾಚೀನ ಕಾಲದ ಬಹು ದೊಡ್ಡ ಪಕ್ಷಿಗಳ ಪಳೆಯುಳಿಕೆಗಳು ದೊರೆತಿವೆ. ನಮ್ಮ ದೇಶದ ಪುರಾಣದ ಶರಭ ಪಕ್ಷಿಯು ಕಲ್ಪ ನೆಯೂ ರೂಖ ಪಕ್ಷಿಯು ಕಲ್ಪನೆಯೂ ಈ ಜನಾಂಗಗಳ ಹಳೆಯ ನೆನಪಿನ ಅವಶೇಷವಾಗಿರಲು ಸಾಕು. ನೂರು ಫೂಟು ಉದ್ದವಾದ ಸಮುದ್ರದ ಹಾವಿನ ಜಾತಿಯ ಪ್ರಾಣಿಯು ಈಗಲೂ ಉಂಟು. ರಾಕ್ಷಸ ಹಕ್ಕಿಗಳು ಮಕ್ಕಳನ್ನು ಕಚ್ಚಿಕೊಂಡು ಹೋಗುತ್ತಿದ್ದ ವರ್ಣನೆ ಬೇರೆ ಕಥೆಗಳಲ್ಲಿದೆ.

ಅರೇಬಿಯನ್ ನ್ಯಾಟ್ಸ್ ಕಥೆಗಳಲ್ಲಿ ಮುಸ್ಲಿಂ ಸಮಾಜದ ಬಹುಪತ್ನಿತ್ವ, ಜನಾಂಗಗಳಲ್ಲಿನ ಅವ್ಯವಹಾರಗಳು ಅಲ್ಲಿಯ ಖೋಜಾ ಜನರು, ಖಲೀಫನ ಸಂಪತ್ತು, ಹಾಗು ಮುಸ್ಲಿಂ ರಾಜ್ಯಗಳಲ್ಲಿನ ವಿಲಾಸ ಸಾಮುಗ್ರಿಗಳ ವರ್ಣನೆ, ಅಲ್ಲಿಯ ಗುಲಾಮರನ್ನಿಟ್ಟುಕೊಳ್ಳುವ ಸಂಪ್ರದಾಯ, ಯುವನ ಸ್ತ್ರೀಯರ ಬುರುಖಾ ಸಂಪ್ರದಾಯ ಮುಂತಾದವು ಕಾಣುತ್ತವೆ. ಮಧ್ಯ ಕಾಲೀನ ಅಥವಾ ಅದಕ್ಕೂ ಪೂರ್ವದ ಮುಸ್ಲಿಂ ರಾಜ್ಯದ ನಾಗರಿ ಕತೆ, ಸಾಮಾಜಿಕ ಜೀವನದ ವರ್ಣನೆಗಳು ನೈಜವಾಗಿ ಬಂದಿವೆ. ಮುಸ್ಲಿಂ ಧರ್ಮದ ಅನೇಕ ಆಚರಣೆಗಳು, ನಂಬಿಕೆಗಳು, ಶಿಷ್ಟಾ ಚಾರಗಳು ಈ ಕಥೆಗಳಲ್ಲಿ ಮೂಡಿವೆ. ಎರಡನೆಯ ಪಂಥ ಕಪೂ ರನ ಕಥೆಯಲ್ಲಿ 'ಯಜಮಾನನು ಮೃತಪಟ್ಟಾಗ ಮಧ್ಯಮ ತರ ಗತಿಯ ಮುಸಲ್ಮಾನ ಕುಟುಂಬಗಳಲ್ಲಿ ನಡೆಯುವ ನಿಜವಾದ ಪದ್ಧತಿಗಳ ವರ್ಣನೆ ಇದೆ." ಕತ್ತೆಯ ಮೇಲೆ ಹತ್ತಿ ಬಂದ

ರೈತನನ್ನು ಕೊಲ್ಲುವ ಪದ್ಧತಿ ಕೈರೋ ನಗರದಲ್ಲಿತ್ತು. ಇಸ್ಲಾಂ ಧರ್ಮದಲ್ಲಿ ನಂಬಿಗೆಯಿಲ್ಲದ ಕಾಫರರನ್ನು "ರೋಷದ ಸೆರೆಮನೆ" ಗಳಲ್ಲಿಡುತ್ತಿದ್ದರು. ಹೆಂಗಸರ ವೇಷ ಧರಿಸಿ ನರ್ತಿಸುವ ಹುಡು ಗರು ವಿವಾಹ ಸಮಾರಂಭಗಳಲ್ಲಿ ಔತಣ ಕೂಟಗಳಲ್ಲಿ ನಟಿಸು ತ್ತಿದ್ದರು. ಪ್ರಯಾಣಕ್ಕೆ ಹೊರಟಾಗ ಮೂರು ದಿನ ವಿಶೇಷ ವಾಗಿ ಅತಿಥಿಸತ್ಕಾರ ಮಾಡುವದು ಪುಣ್ಯವೆಂದು ಭಾವನೆಯಿತ್ತು.

ಆದರೆ ಸಿಂದಬಾದನು ತನ್ನ ಪ್ರಯಾಣದಲ್ಲಿ (ನಾಲ್ಕನೆಯ ಸಲ) ಹೇಳಿದ ಸತ್ತ ಹೆಂಡತಿಯೊಡನೆ ಅವಳ ಗಂಡನನ್ನು ಹೂಳುವ ಪದ್ಧತಿಯು ವಾಸ್ತವಿಕವಾಗಿತ್ತೋ ಹಾಸ್ಯದ ಕಲ್ಪ ನೆಯೋ ತಿಳಿಯದು. ಹಾಸ್ಯದ ಊಹೆಯೇ ಇರಬಹುದು. ಹಸುವಿನ ಮೋರೆಯಂತಿರುವ ಮೀನು ಮರಿಗಳಿಗೆ ಮೊಲೆಕೊಡು ವದು ಸೀಲ್‌ಮೀನವಾಗಿರಬಹುದು. ಶವದ ಅಂಗಗಳನ್ನು ಸುಟ್ಟು ಅದರ ಮಾಂಸವನ್ನು ಕೋಳಿಯ ಮುಂಡಿಯ ಕಾಲು ಗಳನ್ನು ಕಿತ್ತಂತೆ ತಿನ್ನುವ ನರಭಕ್ಷಕನು ಅಫ್ರಿಕಾದಲ್ಲಿ ಇದ್ದಿರ ಬಹುದಾದ ಕಾಡುಮನುಷ್ಯನು. ಸಿಂದಬಾದ ನಾವಿಕನ ಪ್ರಯಾ ಣದ ಕಥೆಗಳು ವಜ್ರದ ಖಣಿ ಇತ್ಯಾದಿ ಗೋಲಕೊಂಡದ ವಜ್ರದ ಗಣಿಗಳ ವರ್ಣನೆಯಿಂದ ಪ್ರೇರಣೆ ಪಡೆದು ರಚಿತವಾಗಿರಬಹು ದೆಂದು ಡಾ. ಸಾಲೆತ್ತೂರರು ಅಭಿಪ್ರಾಯ ಪಡುತ್ತಾರೆ.

ಬಹಳಷ್ಟು ಕಥೆಗಳಲ್ಲಿನ ರಾಕ್ಷಸರು, ಭೂತಗಳು, ಹಾಗು ದುಷ್ಟಜನರನ್ನು ಅತಿಶಯೋಕ್ತಿಯಲ್ಲಿ ಅವರ ತಾಮಸ ಸ್ವಭಾವ ದಂತೆಯೇ ಅವರ ಬಾಹ್ಯ ಆಕಾರವನ್ನು ಕಂಡವರ ಸಂಕೇತ

ಎಂದು ಹೇಳಬಹುದು. ಕ್ರೂರ ಕಾಡುಜನರಲ್ಲಿ ಹಲವರನ್ನು ಈ ವರ್ಗಗಳು ಪ್ರತಿನಿಧಿಸಬಹುದು.

ಮೊಳಕಾಲುದ್ದದ ಮನುಷ್ಯರು ಅಪವಾದಾತ್ಮಕವಾಗಿ ಜಗತ್ತಿನಲ್ಲಿ ಕಾಣಬರುತ್ತಾರೆ. ಸಮುದ್ರದಲ್ಲಿ ನೀರಿನ ಮೇಲೆ ತನ್ನ ದೇಹದ ಮೇಲ್ಭಾಗವನ್ನು ತೋರಿಸಿ ಮಮತೆಯ ಕಣ್ಣುಗಳಿಂದ ನೋಡುವ ಸಸ್ತನಿ ವರ್ಗದ ಒಂದು ಜಾತಿಯ ಮೀನು ಜಲಕನ್ಯೆಯರ ಕಲ್ಪನೆಗೆ ಕಾರಣವಾಗಿದೆ. ಈಗಲೂ ನಾವಿಕರು ಇಂಥ ಅನುಭವ ಹೊಂದುತ್ತಾರೆ.

ಪ್ರಾಣಿಗಳು, ಪಕ್ಷಿಗಳು, ವಸ್ತುಗಳು ಮನುಷ್ಯರಂತೆಯೇ ಮಾತನಾಡುವವೆಂಬ ಈ ಕಥೆಗಳಲ್ಲಿನ ಅಸ್ವಾಭಾವಿಕ ಅಂಶಗಳ ಕುರಿತು ಹೀಗೆ ಹೇಳಬಹುದು. ಪ್ರಾಚೀನ ಮಾನವನು ನಿಸರ್ಗದೊಂದಿಗೆ ತೀರ ಹೊಂದಿಕೊಂಡು ಬಾಳುವೆ ಮಾಡುತ್ತಿದ್ದನು. ನಕ್ಷತ್ರಗಳನ್ನು ನೋಡಿಕೊಂಡು ರಾತ್ರಿ ಕಾಲದಲ್ಲಿ ಸಮಯವನ್ನು ತಿಳಿಯುತ್ತಿದ್ದನು. ದಿಕ್ಕನ್ನು ಗೊತ್ತುಹಚ್ಚುತ್ತಿದ್ದನು. ಹಾಗೆಯೇ ಪ್ರಾಣಿಗಳ ಬೇಟೆಯಾಡುವಾಗ ಅವುಗಳ ಸ್ವಭಾವ, ಆಚರಣೆ ಮೊದಲಾದವನ್ನು ಚನ್ನಾಗಿ ತಿಳಿದುಕೊಳ್ಳುವದು ಅವಶ್ಯ. ಆದ್ದರಿಂದ ಪಾತ್ರಗಳ ಸ್ವಭಾವ, ಅವುಗಳ ವ್ಯಕ್ತಿತ್ವಗಳನ್ನು ಈ ಜನ ಚನ್ನಾಗಿ ಅರಿತಿದ್ದರು. ಸಾಕುಪ್ರಾಣಿಗಳನ್ನು ಬೆಳೆಸಿದವರು ಅವುಗಳ ಕೂಗಿನ ಅರ್ಥವನ್ನು ಅರಿಯಬಲ್ಲರು. ಮಾತು ಕೇಳಿಸಿ ಅವುಗಳಿಂದ ಕೆಲಸ ಮಾಡಿಸಿಕೊಳ್ಳಬಲ್ಲರು. ಆದರಿಂದ ಅವುಗಳ ಭಾವನೆಗಳನ್ನು 'ಮಾತನಾಡಿದವೋಲು' ಅರ್ಥಮಾಡಿಕೊಳ್ಳುವ ಶಕ್ತಿಯನ್ನು ಹಳ್ಳಿಗಳ ಜನರು ಪಡೆದಿದ್ದರು. ಆ ಕಲ್ಪನೆಗಳನ್ನೆ ಕವಿ ಹೃದಯದಿಂದ ಬೆಳಸಿ ಅವನ್ನು

ಮನುಷ್ಯರಿಗೆ ಹೋಲಿಸಿ ಆ ಪ್ರಾಣಿಗಳ ಕುರಿತಾದ ಕಥೆಗಳನ್ನು ಕಟ್ಟಿದರು. ಪ್ರಾಣಿಗಳ ಭಾಷೆ, ಪಕ್ಷಿಗಳ ಭಾಷೆ ಅರ್ಥವಾಗು ವದು ಎಂದು ಬರುವ ಕಥೆಗಳಲ್ಲಿನ ವಾಸ್ತವಿಕತೆಯನ್ನು ಈ ರೀತಿಯಿಂದ ಕಂಡುಕೊಳ್ಳಬಹುದು. ಕರಡಿಗಳು, ತೋಳಗಳು, ಇತರ ಕಾಡು ಪ್ರಾಣಿಗಳಿಂದ ಆಗುವ ಅಪಕಾರ, ಸಾಕುಪ್ರಾಣಿ ಗಳ ಮಮತೆ ಇತ್ಯಾದಿಗಳ ಚಿತ್ರಣಗಳನ್ನು ನೋಡಬಹುದು. ಪ್ರಾಣಿಗಳ ಕಥೆಗಳಲ್ಲಿ ಅನೇಕ ಪ್ರಾಣಿಗಳು ಮನುಷ್ಯರ ಅಪ ರಾವತಾರಗಳೇ ಆಗಿವೆ.

ಜಾನಪದ ಕಥೆಗಳು ಜನಾಂಗಗಳಲ್ಲಿ ಯಾವ ಕಾಲದಲ್ಲಿ ರಚಿತವಾದವೋ ಆ ಕಾಲದ ಜೀವನದ, ನಂಬಿಕೆಗಳ, ಆಚರಣೆ ಗಳ ಇತಿಹಾಸ ಎನ್ನಬಹುದು. ಎಷ್ಟೋ ಅವಾಸ್ತವ ಅಂಶ ಗಳಿಂದ ಕೂಡಿದ್ದರೂ ಇಲ್ಲಿನ ಭಾವನೆಗಳು ತೀರ ವಾಸ್ತವ ವಾಗಿವೆ. ಸಿಂಡರೆಲಾಳಿಗೆ ಮಲತಾಯಿಯೂ, ಎರಡು ಜನ ಅವಳ ಹೆಣ್ಣು ಮಕ್ಕಳೂ ಪಡುವ ಅಸೂಯೆಯು ತುಂಬ ವಾಸ್ತವವಾದ ಭಾವ. ಅದರಂತೆ ಅವರು ಕೊಡುವ ಕಷ್ಟಗಳು ಅದರಿಂದ ಸಿಂಡರೆಲ ಪಡುವ ದುಃಖಗಳು ಅಷ್ಟೇ ವಾಸ್ತವಿಕ. "ಹಿಮದಂತೆ ಬಿಳಿಯ ಹುಡುಗಿ"ಯ ಕಷ್ಟಗಳೂ ಹಾಗೆಯೆ. "ಆರು ಹಂಸಗಳು" ಕಥೆಯಲ್ಲಿನ ಹಂಸಗಳಾದ ಪರಿವರ್ತನ ಅಸ್ವಾಭಾವಿಕವಾದರೂ, ರಾಜನು ಹಿರಿರಾಣಿಯ ಮಕ್ಕಳನ್ನು ಬೇರೆ ಮನೆಯಲ್ಲಿರಿಸುವದೂ,ಅವನ ಅವರ ಮೇಲಿನ ಪ್ರೇಮವೂ, ರಾಣಿಯು ಅವರನ್ನು ಹಾಳುಮಾಡಲೆಳಸುವದೂ ತುಂಬ ವಾಸ್ತ ವಿಕ ಅಂಶಗಳು.

"ಒಕ್ಕಣ್ಣಿ, ಇಕ್ಕಣ್ಣಿ, ಮುಕ್ಕಣ್ಣಿ" ಎಂಬ ಕಥೆಯಲ್ಲಿ

ಎರಡು ಕಣ್ಣಿನವಳ ಮೇಲಿನ ಅವಳ ಅಕ್ಕಂದಿರ ಅಸೂಯೆಯು ನೈಜವಾದುದು; ಅದನ್ನು ಕೊಂದು ಅದರ ಕರುಳನ್ನು ತೋಟದಲ್ಲಿ ಹುಗಿದಾಗ ಚಿನ್ನದ ಹಣ್ಣು ಬಿಡುವ ಮರವು ಅವಾಸ್ತವಿಕವಾದರೂ ಹಸಿವಿನಿಂದ ಬಳಲುವ ಹುಡುಗಿಯ ಚಿತ್ರಣವು ತುಂಬ ವಾಸ್ತವಿಕವಾಗಿದೆ. ನಂತರ ಇಕ್ಕಣ್ಣಿನವಳು ತನಗೆ ಗೊತ್ತಿದ್ದಂತೆ ಚಿಕ್ಕ ಪ್ರಾರ್ಥನೆಯನ್ನು ಹೇಳಿದಳು. "ಪ್ರಭುವಾದ ದೇವರೇ, ಯಾವಾಗಲೂ ನಮ್ಮೊಡನೆಯೇ ಇರು" ಎಂದು ಹೇಳಿ ಸ್ವಲ್ಪ ಆಹಾರವನ್ನು ತಿಂದಳು; ಮತ್ತು ಅದನ್ನು ತಿನ್ನುವಾಗ ಸಂತೋಷವನ್ನನುಭವಿಸಿದಳು" ಈ ಉದಾಹರಣೆಯನ್ನು ಎತ್ತಿ ಹೇಳಿದ ವಿಮರ್ಶಕ ಪೆಡ್ರೈಕ್ ಕಾಲಮ್ ಹೇಳುವರು: "ಆ ಹುಡುಗಿಗೆ ನಿಜವಾಗಿಯೂ ಹಸಿವಾಗಿತ್ತು ಎಂಬುದು ನಮಗೆ ಚನ್ನಾಗಿ ಅರ್ಥವಾಗುತ್ತದೆ."

ಆದರಿಂದಲೆ ಜೊಸೆಫ್ ಕೆಂಪ್‌ಬೆಲ್ಲರು ಬಹು ಮಾರ್ಮಿಕವಾಗಿ ಈ ಮಾತನ್ನು ಹೇಳುತ್ತಾರೆ: "ಜಾನಪದ ಕಥೆಯು ಅಂತರಾತ್ಮದ ಚಿತ್ರ-ಭಾಷೆಯ ಅಂಕಲಿಪಿಯಾಗಿದೆ."

## ೬. ಜಾನಪದ ಕಥೆಗಳಲ್ಲಿ ಹಾಸ್ಯ

ಜಾನಪದ ಕಥೆಗಳಲ್ಲಿ ಸಾಮಾನ್ಯವಾಗಿ, ಬಹುತರವಾಗಿ ಎಲ್ಲ ಕಥೆಗಳಲ್ಲಿ ಹಾಸ್ಯವು ಒಂದಿಲ್ಲೊಂದು ರೀತಿಯಲ್ಲಿ ಕಾಣಿಸಿಕೊಳ್ಳುತ್ತದೆ. ಜನ ಮನರಂಜನೆಗೆಯ್ಯಬೇಕೆಂಬ ಉದ್ದೇಶದಿಂದ

ಹೊರಟ ಈ ಕಥೆಗಳಲ್ಲಿ ಹಾಸ್ಯವು ಬರುವದು ಕ್ರಮಪ್ರಾಪ್ತ ವಾಗಿದೆ. ಜನರ ಜಾಣತನ, ಮೌಢ್ಯ, ಹಾಸ್ಯ ಪ್ರವೃತ್ತಿ, ರಸಿಕತೆ ಇವೆಲ್ಲ ಜಾನಪದ ಕಥೆಗಳಲ್ಲಿ ಚನ್ನಾಗಿ ಮೂಡಿಬಂದಿವೆ. ಅನೇಕರು ತಿಳಿದಿರುವಂತೆ ಹಳ್ಳಿಯ ಅಶಿಕ್ಷಿತ ಅಥವಾ ಅಲ್ಪ ಶಿಕ್ಷಿತ ಜನರು ಕೇವಲ ಕಾಡುಜನರಲ್ಲ. ಹಳ್ಳಿಯ ಜನರೆಂದರೆ ದನಗಳಲ್ಲ; ತಿರಸ್ಕಾರಕ್ಕೆ ಅರ್ಹರಲ್ಲ. ಆದರೂ ಅವರಲ್ಲಿನ ಪೆದ್ದರ ಕಥೆ ಗಳನ್ನು ಕೇಳಿ ಅಂಥ ಅಪೂರ್ವ ವ್ಯಕ್ತಿಗಳ ಪರಿಚಯವನ್ನು ಬುದ್ಧಿವಂತರಾದ ಹಳ್ಳಿಯ ರಸಿಕರಿಂದಲೆ ಅರಿಯಬಹುದು. ಜನ ರಲ್ಲಿ ಹಾಸ್ಯಪ್ರವೃತ್ತಿಯು ನಾಗರಿಕ ಶಿಖಾಮಣಿಗಳಿಗೂ ನಗು ವನ್ನು ತರುವುದು. ಮೂಲತಃ ಹೆಡ್ಡರಲ್ಲದವರೂ ಕೂಡ ಆಸೆ ಗಳ ಸೆಳೆತಕ್ಕೆ ಸಿಕ್ಕು ಆಚರಿಸುವ ಮೌಢ್ಯವನ್ನು ಕಂಡು ಕಥೆ ಗಾರನೂ ನಕ್ಕು ಅದು ನಾಟಕೀಯವಾಗಿ ಪ್ರಕಟವಾಗುವಂತೆ ಕಥೆ ಹೆಣೆಯುತ್ತಾನೆ. ಉದಾಹರಣೆಗೆ ಒಬ್ಬ ಭ್ರಮರವೃತ್ತಿಯ ಕಾಮುಕನು ಒಬ್ಬ ದನಕಾಯುವ ಸುಂದರಿಯನ್ನು ಮೋಹಿಸಿ ದನು. ಆಕೆಯು ಎಮ್ಮೆ ದನಗಳನ್ನು ಕಾಯುತ್ತಿದ್ದಲ್ಲಿಗೆ ಹೋಗಿ ತಾನು ಅವಳಿಗಾಗಿ ಏನು ಬೇಕಾದರೂ ಮಾಡಲು ಸಿದ್ಧನಿರುವೆ ನೆಂದೂ ಅವಳು ತನಗೆ ಒಲಿಯಬೇಕೆಂದೂ ಹೇಳಿಕೊಂಡನು. ಆ ಹುಡುಗಿಯು ಮನದಲ್ಲಿಯೆ ನಕ್ಕು "ಹಾಗಾದರೆ ಅತೀ ಹೊಲಸಾಗಿದ್ದ ನನ್ನ ಎಮ್ಮೆಯನ್ನು ಎರಡು ವರ್ಷಗಳ ವರೆಗೆ ಮುದ್ದಿಸುತ್ತಿರು; ಆ ಮೇಲೆ ನನ್ನ ಬಳಿಗೆ ಬಾ" ಎಂದು ಹೇಳಿ ದಳು. ಆತನು ಅವಳ ಅನುಗ್ರಹವನ್ನು ಪಡೆಯಲು ಪ್ರತಿ ದಿನವೂ ತನ್ನ ಮುದ್ದಿನ ಸೇವೆಯನ್ನು ಎಮ್ಮೆಗೆ ಸಲ್ಲಿಸುತ್ತ ಬಂದನು. ಎರಡು ವರ್ಷಗಳು ಮುಗಿದ ಮೇಲೆ ಅವಳ ಪ್ರೇಮದ

ಕಾಣಿಕೆಯಾಗಿ ಪ್ರಥಮತಃ ತನಗೆ ಮುತ್ತು ಕೊಡಬೇಕೆಂದು ಆಕೆಯನ್ನು ಕೇಳಿದನು. ಆಗ ಅವಳು ಹೀಗೆ ಹೇಳಿದಳು. "ನೀನು ಬಹಳ ಹೊಲಸಾಗಿದ್ದ ನನ್ನ ಎಮ್ಮೆಯನ್ನು ಮುದ್ದಿಸು ತ್ತಿದ್ದುದನ್ನು ನೋಡಿ ನಿನ್ನ ನಿಷ್ಠೆಗೆ ಮೆಚ್ಚಿರುವೆನು. ಆದರೆ ಎಮ್ಮೆಯ ಸವತಿಯಾಗಲು ನಾನು ಸಿದ್ಧಳಿದ್ದೇನೆ ಎಂದು ನೀನು ಎಣಿಸಬಾರದು !"

ಜಾನಪದ ಕಥಗಳಲ್ಲಿನ ಬುದ್ಧಿವಂತಿಕೆಯ ಹಾಸ್ಯವನ್ನು "ಶಕ್ತಿಗಿಂತ ಯುಕ್ತಿ ಮೇಲು" ಎಂಬ ತತ್ವವನ್ನು ಪ್ರತಿಪಾದಿ ಸುವ ಅನೇಕ ಕಥೆಗಳಲ್ಲಿ ನೋಡಬಹುದು. ಉದಾ:—ಒಬ್ಬನಿಗೆ ಪುಕ್ಕಟೆ ಊಟ ಗಿಟ್ಟಿಸುವ ಚಾಳಿಯಿತ್ತು. ಹೀಗೆಯೇ ಅವನು "ಊಟ ಕಳೆದರೆ ಕೋಟಿ ಲಾಭ" ಎಂದು ಊರೂರು ತಿರುಗು ತ್ತಿದ್ದನು. ಆದರೆ ಒಬ್ಬ ಮನುಷ್ಯನು "ಊಟ ಕೊಡಲಿಕ್ಕಿಲ್ಲ" ಎಂದು ಕಡಾಖಂಡಿತ ಹೇಳಿದನು. ಅತಿಥಿಯು "ಊಟ ಕೊಟ್ಟ ಹೊರತು ಬಿಡಲಿಕ್ಕಿಲ್ಲ" ಎಂದು ಉತ್ತರಿಸಿದನು. "ಊಟ ಹಾಕ ದಿದ್ದರೆ ನೀನು ಮಾಡುವದೇನು ?" ಇದು ಗೃಹಸ್ಥನ ಪ್ರಶ್ನೆ. "ಬೇರೊಂದು ಊರಿನಲ್ಲಿ ನನಗೆ ಊಟ ನೀಡದಿದ್ದಾಗ ಮಾಡಿ ದಂತೆಯೇ ಮಾಡುತ್ತೇನೆ" ಎಂದು ಅತಿಥಿಯು ಜೋರಾಗಿ ಹೆದರಿಕೆ ಹಾಕುವ ಧಾಟಿಯಲ್ಲಿ ಉತ್ತರಕೊಟ್ಟನು. ಗೃಹ ಸ್ಥನು ಹೆದರಿ ಅವನಿಗೆ ಊಟ ನೀಡಿದನು. ಊಟ ಮುಗಿದ ಮೇಲೆ "ಊಟ ನೀಡದಿದ್ದವನ ಮನೆಯಲ್ಲಿ ಅದಕ್ಕಾಗಿ ನೀನು ಏನು ಮಾಡಿದೆ ?" ಎಂದು ಕೇಳಿದುದಕ್ಕೆ "ಉಪ ವಾಸ ಉಳಿದುಬಿಟ್ಟೆ !" ಎಂದು ಅತಿಥಿಯು ಉತ್ತರ ಕೊಟ್ಟನು.

ಒಂದು ಕಡೆ ಜನರು ಹೊಡೆದಾಟ ಮಾಡಿದರು. ಒಬ್ಬನು ಸೋಲುವ ಹೆದರಿಕೆಯಿಂದ ಓಡಿದನು. "ಹೇಡಿ, ಓಡುತ್ತೀಯಾಕೆ ?" ಎಂದು ಮತ್ತೊಬ್ಬನು ಕೇಳಿದನು. "ಇಂದು ಹೊಡೆದಾಡಿ ನೀನು ಸತ್ತುಹೋದರೆ, ನೀನು ನಾಳೆ ನನ್ನ ಕೂಡ ಮಾತ್ರವಲ್ಲ; ಯಾರೊಡನೆಯೂ ಹೋರಾಡಲಾರೆ !" ಎಂದು ಆ ವಚನಶೂರನು ಉತ್ತರನ ಪೌರುಷವನ್ನು ಕೊಚ್ಚಿದನು.

ಕೆಲವು ಪ್ರಾಣಿಗಳು ತಮ್ಮ ವೈಶಿಷ್ಟ್ಯಗಳಿಂದ ಹೆಸರೆತ್ತಿದ ಕೂಡಲೆ ನಗುವಿಗೆ ಕಾರಣವಾಗುತ್ತವೆ. ಉದಾ :—ನರಿ, ಮಂಗ ಕತ್ತೆ. ಅದರಲ್ಲಿಯೂ ನರಿಯ ಜಾಣತನದ ಕಥೆಗಳು ಹೆಚ್ಚು ಹಾಸ್ಯವನ್ನು ತರುತ್ತವೆ. "ನರಿ ಮತ್ತು ಬೆಕ್ಕು" ಕಥೆಯಲ್ಲಿ ಇದು ವ್ಯತ್ಯಾಸವಾಗಿದೆ. ನರಿಯು ಬೆಕ್ಕನ್ನು ತಿರಸ್ಕಾರದಿಂದ ನೋಡುತ್ತದೆ. "ನಿನಗೆ ಎಷ್ಟು ಉಪಾಯಗಳು ಗೊತ್ತಿವೆ ?" ಎಂದು ಕೇಳುತ್ತದೆ. ''ನನಗೆ ಒಂದೇ ಉಪಾಯ ಗೊತ್ತು. ಬೇಟೆ ನಾಯಿಗಳು ಬಂದಾಗ ಮರ ಹತ್ತಿ ಪಾರಾಗುತ್ತೇನೆ" ಎಂದಿತು ಬೆಕ್ಕು. ನರಿಯು ''ಇಷ್ಟೇಯೊ ? ನನಗೆ ನೂರು ಉಪಾಯಗಳು ಗೊತ್ತು. ನಾನು ಬಹಳ ತಕ್ಕು ವಿದ್ಯೆಯಲ್ಲಿ ಪ್ರವೀಣ" ಎಂದಿತು. ನಾಲ್ಕು ಬೇಟೆ ನಾಯಿಗಳೊಂದಿಗೆ ಬೇಟೆಗಾರ ಬಂದಾಗ ಬೆಕ್ಕು ಮರ ಹತ್ತಿ ತಪ್ಪಿಸಿಕೊಂಡಿತು. ಆದರೆ ನರಿಯು ಸಿಕ್ಕಿಬಿಟ್ಟಿತು. ಹೀಗೆ ನರಿಯ ಫಜೀತಿ ನಗುವನ್ನು ತರುತ್ತದೆ ಇಲ್ಲಿ.

ಒಂದು ರಶಿಯನ್ ಜಾನಪದ ಕಥೆಯಲ್ಲಿ ನ್ಯಾಯಾಧೀಶನು ಲಂಚದ ಆಶೆಯಿಂದ ಪ್ರತಿವಾದಿಯ ಪರವಾಗಿ ಚಮತ್ಕಾರವಾದ ನಿರ್ಣಯವನ್ನು ಕೊಡುತ್ತಾನೆ. ತೋರಿಕೆಗೆ ಅದು ಪ್ರತಿವಾದಿಗೆ ಶಿಕ್ಷೆಯಾದರೂ ನಿಜವಾಗಿ ವಾದಿಗಳಿಗೇ ಶಿಕ್ಷೆಯಾಗಿ

ರುತ್ತದೆ. ಈ ಚಾತುರ್ಯವು ತುಂಬ ನಗುವನ್ನುಂಟು ಮಾಡುತ್ತದೆ.

## ಶಾಮುಕನ ನ್ಯಾಯತೀರ್ಪು (ಕಥೆ)

ಇಬ್ಬರು ಅಣ್ಣತಮ್ಮಂದಿರಿದ್ದರು. ಹಿರಿಯನು ಶ್ರೀಮಂತ ಯುವತಿಯನ್ನು ಮದುವೆಯಾಗಿ ಶ್ರೀಮಂತಿಕೆಯ ಸುಖವನ್ನನು ಭವಿಸುತ್ತಿದ್ದನು. ತಮ್ಮನು ಬಡವ. ಅಣ್ಣನಿಂದ ಒಂದು ಕುದುರೆಯನ್ನು ಬೇಡಿ ತಕ್ಕೊಂಡ ಅವನು ಅಚಾತುರ್ಯದಿಂದ ಅದರ ಬಾಲ ಕತ್ತರಿಸಿ ಹೋಗುವಂತೆ ಮಾಡಿದನು. ಅಣ್ಣನು ನ್ಯಾಯಾಧೀಶನಲ್ಲಿ ಫಿರ್ಯಾದಿಕೊಟ್ಟು ಪರಿಹಾರ ಕೇಳಿದನು. ಇಬ್ಬರೂ ಪಟ್ಟಣಕ್ಕೆ ಹೊರಟವರು ಒಂದು ಹಳ್ಳಿಗೆ ಬಂದರು. ಶ್ರೀಮಂತ ಅಣ್ಣನಿಗೆ ಒಬ್ಬ ಪುರೋಹಿತನು ಸತ್ಕರಿಸಿದನು. ತಮ್ಮನು ಗುಪ್ತವಾಗಿ ಅವನ ಮಾಳಿಗೆಯ ಮೇಲೆ ಹೋಗಿ ಕೆಳಗೆ ಎರಗಿ ನೋಡುವಾಗ ಏಣಿಯಿಂದ ಬಿದ್ದು ಮನೆಯಾತನ ಶಿಶುವಿನ ಮೇಲೆ ಬಿದ್ದು ಅದನ್ನು ಕೊಂದನು. ಆತನೂ ಫಿರ್ಯಾದಿ ಕೊಟ್ಟನು.

ಮುಂದೆ ಹೋಗಲು ತಮ್ಮನು ದಾರಿಯಲ್ಲಿಯೆ ಒಂದು ಸೇತುವೆಯ ಮೇಲಿಂದ ಕೆಳಗೆ ಬಿದ್ದು ಆತ್ಮಹತ್ಯೆ ಮಾಡಿಕೊಳ್ಳ ಬೇಕೆಂದು ಕೆಳಗೆ ಹಾರಿದನು. ಅಲ್ಲಿ ರೋಗಿಯಾದ ಮುದುಕ ನನ್ನು ಒಬ್ಬನು ಸ್ನಾನಮಾಡಿಸುತ್ತಿದ್ದನು. ಈತನು ಮುದುಕನ ಮೇಲೆ ಬೀಳಲು ಮುದುಕನು ಸತ್ತುಹೋದನು. ಮುದುಕನ ಮಗನೂ ಅದೇ ನ್ಯಾಯಾಧೀಶನಲ್ಲಿ ಫಿರ್ಯಾದಿ ಕೊಟ್ಟನು.

ಬಂದ" ಈ ಗಾದೆಗಳು ನಡೆದಿರಬಹುದಾದ ಘಟನೆಯಿಂದ ಅ
ವ್ಯಕ್ತಿಗಳ ಪೆದ್ದತನವನ್ನು ಎತ್ತಿತೋರಿ ಹಾಸ್ಯಕ್ಕೆ ಕಾರಣ
ವಾಗುತ್ತವೆ.

ಗ್ರಿಮ್ ಸೋದರರ ಅನೇಕ ಕಥೆಗಳಲ್ಲಿ ಸಿಂಪಿಗ (Tailor)
ನ ಜಾಣತನವೂ ರಾಕ್ಷಸರ ಅಥವಾ ರಾಣಿಯರ ಪೆದ್ದತನವೂ
ಕಾಣುತ್ತದೆ.

"ಪರಾಕ್ರಮಿಯಾದ ಚಿಕ್ಕ ಸಿಂಪಿಗನ ಕಥೆ"ಯಲ್ಲಿ ಸಿಂಪಿ
ಗನ ಧೈರ್ಯ ಹಾಗು ಮುಂಧೋರಣೆಯು ಸ್ವಾರಸ್ಯವಾಗಿ
ದ್ದಂತೆಯೇ ಬಲಿಷ್ಠ ರಾಕ್ಷಸರ ಹೇಡಿತನವೂ ಪೆದ್ದತನವೂ
ಹಾಸ್ಯಕ್ಕೆ ಕಾರಣವಾಗುತ್ತವೆ.

ಸಿಂಪಿಗನು ತನ್ನ ಜಾಕೆಟ್ಟಿನ ಮೇಲೆ "ಒಂದು ಹೊಡೆ
ತಕ್ಕೆ ಏಳು" ಎಂದು ಬರೆದುಕೊಂಡ ಸೊಂಟಪಟ್ಟಿಯನ್ನು
ಕಟ್ಟಿಕೊಂಡಿರುತ್ತಾನೆ. ಪರ್ವತದ ಮೇಲೆ ಒಬ್ಬ ಬಲಿಷ್ಠ
ರಾಕ್ಷಸನು ಕಂಡನು. "ನನ್ನೊಡನೆ ಬರುವೆಯಾ ?" ಎಂದು
ಸಿಂಪಿಗನು ಧೈರ್ಯದಿಂದ ಕೇಳಲು ರಾಕ್ಷಸನು ತಿರಸ್ಕಾರದಿಂದ
ಬಯ್ದನು. ಆದರೆ ಆತನ ಸೊಂಟ ಪಟ್ಟಿಯ ಮೇಲೆ ಬರೆದು
ದನ್ನು ನೋಡಿ ಏಳು ಜನರನ್ನು ಒಂದೇ ಹೊಡೆತಕ್ಕೆ ಕೊಂದವ
ನೆಂದು ತಿಳಿದು, ಆದರೂ ಈತನ ಶಕ್ತಿಯನ್ನು ಪರೀಕ್ಷಿಸುವ
ನೆಂದು ಕಲ್ಲನ್ನು ಹಿಂಡಿ ನೀರನ್ನು ಹೊರಡಿಸಿ "ಹೀಗೆ ಮಾಡು"
ಎಂದು ಸಿಂಪಿಗೆ ಹೇಳಿದನು. ತನ್ನ ಕಿಸೆಯಲ್ಲಿನ ಗಿಣ್ಣವನ್ನು
ತೆಗೆದು ಹಿಂಡಿ ಕಲ್ಲಿನಿಂದ ಎಣ್ಣೆಯನ್ನು ಹೊರಡಿಸಿದಂತೆ ತೋರಿ
ಸಿದನು ಸಿಂಪಿ. ರಾಕ್ಷಸನು ದೊಡ್ಡ ಕಲ್ಲುತೆಗೆದು ಮೇಲಕ್ಕೆ
ಹಾರಿಸಲು ಅದು ಬಹಳ ಮೇಲೆ ಹೋಗಿ ಕೆಳಗೆ ಬಿತ್ತು. ಸಿಂಪಿ

ಕಿಸೆಯಲ್ಲಿ ಇಟ್ಟುಕೊಂಡಿದ್ದ ಹಕ್ಕಿಯನ್ನು ಹಾರಿಸಿ "ನಾನು ಹಾರಿಸಿದ ಕಲ್ಲು ಕೆಳಗೆ ಬೀಳದಷ್ಟು ಎತ್ತರ ಹೋಯಿತು" ಎಂದನು. ರಾಕ್ಷಸನು ಮರದ ಬೊಡ್ಡೆಯನ್ನು ಕಿತ್ತು ಅದನ್ನು ಹೊತ್ತುಕೋ ಎನ್ನಲು ಸಿಂಪಿಗನು "ಟೊಂಗೆಗಳಿಂದ ಅದು ಭಾರವಾಗಿದೆ. ನಾನು ಟೊಂಗೆಯನ್ನು ಹೊರುತ್ತೇನೆ" ಎಂದು ಮರದ ಬೊಡ್ಡೆಯನ್ನು ರಾಕ್ಷಸನಿಗೆ ಹೊರಿಸಿ ಹಿಂದೆ ಟೊಂಗೆಯ ಮೇಲೆ ತಾನು ಕುಳಿತನು. ದಿಮ್ಮಿಯನ್ನಿಳಿಸುವಾಗ ಹಿಂದಿನಿಂದ ಟನ್ನೆ ಹಾರಿ ಬಂದು ರಾಕ್ಷಸನ ಮುಂದೆ ನಿಂತನು.

ರಾಕ್ಷಸರ ಗವಿಯಲ್ಲಿ ಇವನ ಠೀವಿಯನ್ನೂ ಸೊಂಟ ಪಟ್ಟಿಯ ಬರೆಹವನ್ನೂ ನೋಡಿ ಹೆದರಿದ ರಾಕ್ಷಸರು ದಿಕ್ಕಾ ಪಾಲಾಗಿ ಓಡಿಹೋದರು.

ಇಬ್ಬರು ರಾಕ್ಷಸರನ್ನು ಕೊಲ್ಲಲು ರಾಜನು ಇವನನ್ನು ನಿಯಮಿಸಿದಾಗ ನಿದ್ರಿಸುತ್ತಿದ್ದ ಅವರಿಗೆ ಕಾಣದಂತೆ ಇಬ್ಬರಿಗೂ ಕಲ್ಲುಗಳನ್ನು ಹೊಡೆದನು. ಅವರು ಎಚ್ಚತ್ತು ಒಬ್ಬೊಬ್ಬನೂ ಮತ್ತೊಬ್ಬ ರಾಕ್ಷಸನೇ ತನಗೆ ಹೊಡೆದನೆಂದು ಸಿಟ್ಟಿನಿಂದ ಹೊಡೆದಾಡಿ ಸತ್ತುಬಿದ್ದರು.

ಹೆಡ್ಡರಾದ, ಬಲಿಷ್ಠರಾದ ರಾಕ್ಷಸರ ಹೇಡಿತನದಷ್ಟೇ ಸಿಂಪಿಗನ ಧೈರ್ಯವೂ ಬುದ್ಧಿಕುಶಲತೆಯೂ ತುಂಬ ಮೋಜ-ನ್ನುಂಟು ಮಾಡುತ್ತವೆ.

"ಸಿಂಹಾಸನ ದ್ವಾತ್ರಿಂಶಿಕಾ" ಗ್ರಂಥದಲ್ಲಿ ಗಣಿಯಾಗಿದ್ದ ವಿಕ್ರಮಾದಿತ್ಯನನ್ನು ದ್ವೇಷದಿಂದ ಕೊಲ್ಲಲೆಳಸಿದ್ದ ವೇಶ್ಯೆ ರೂಪ ಸುಂದರಿಗೆ ದೇವರ ಮೂರ್ತಿಯ ಹಿಂದೆ ಅವಿತುಕೊಂಡು ಸಶರೀರ ಳಾಗಿ ಸ್ವರ್ಗಕ್ಕೆ ಹೋಗಲು ಅವಳು ಮಾಡಬೇಕಾದ ಉಪಾಯ

ವನ್ನು ವಿಕ್ರಮನು ಹೇಳಿದನು. ಅವಳು ಅದನ್ನು ನಂಬಿ ಇದ್ದ ದ್ರವ್ಯವನ್ನೆಲ್ಲ ದಾನಮಾಡಿ, ತಲೆ ಬೋಳಿಸಿಕೊಂಡು ಸುತ್ತಲೂ ಜನ ನೆರೆದಿರಲು ಬತ್ತಲೆಯಾಗಿ ಕತ್ತೆಯ ಮೇಲೆ ಕೂತು ಹೊರಟ ಮೆರವಣಿಗೆಯು ಯಾರಿಗಾದರೂ ನಗೆಯನ್ನುಂಟು ಮಾಡುತ್ತದೆ.

ಕಥಾ ಸರಿತ್ಸಾಗರದ ಮೂಢರ ಕಥೆಗಳು ಪ್ರಸಿದ್ಧವಾಗಿವೆ. ನೀರಿನ ಕಲಶದಲ್ಲಿ ಒಬ್ಬನು ಬೆಂಕಿಯನ್ನಿಟ್ಟರೆ, ಇನ್ನೊಬ್ಬನು ಎಳ್ಳನ್ನು ಹುರಿದು ಗದ್ದೆಯಲ್ಲಿ ಬಿತ್ತುತ್ತಾನೆ. ಮತ್ತೊಬ್ಬನು ಆಹಾರದ ರುಚಿಯು ಉಪ್ಪಿನಿಂದ ಬಂದಿದೆಯೆಂದು ಕೇಳಿ ಬರಿಯ ಉಪ್ಪನ್ನು ಮುಕ್ಕುತ್ತಾನೆ !

ಗ್ರಿಮ್ ಸೋದರರ ಕಥೆಗಳಲ್ಲಿ "ಹನ್ನೆರಡು ಸೋಮಾರಿಗಳು" ಎಂಬ ಕಥೆ ತಕ್ಕಮಟ್ಟಿಗೆ ಹಾಸ್ಯಗುಣವನ್ನು ಹೊಂದಿದೆ. ಮೊದಲನೆಯ ಸೋಮಾರಿಯು ಊಟದ ಸಲುವಾಗಿ, ಕುಡಿಯುವ ಸಲುವಾಗಿ, ಜನ್ಮತಾಳಿದ ಕೂಳಬಕ್ಕನು; "ನಾಲ್ಕು ಊಟಗಳನ್ನು ಮಾಡಿಕೊಂಡು ನಾನು ಸ್ವಲ್ಪ ಕಾಲ ಉಪವಾಸ ಮಾಡಿ, ಮತ್ತೆ ಹಸಿವನ್ನು ತಂದುಕೊಂಡು ಮತ್ತೆ ಊಟ ಮಾಡುತ್ತೇನೆ" ಎಂದು ಆತನು ತನ್ನ ಪದ್ಧತಿಯನ್ನು ಹೇಳುತ್ತಾನೆ.

ಮತ್ತೊಬ್ಬ ಸೋಮಾರಿ ಬೇರೆ ತರದವನು. ಅವನ ಮುಂದೆಯೆ ಬ್ರೆಡ್ಡನ್ನಿಟ್ಟಿದ್ದರೂ ಅದನ್ನು ತೆಗೆದುಕೊಂಡು ತಿನ್ನಲಾರದೆ ಸೋಮಾರಿತನದಿಂದ ಹಸಿವಿನಿಂದ ಸತ್ತೇಹೋಗುವ ಪ್ರಸಂಗ ಅವನಿಗೆ ಬಂದಿತ್ತು !

ಅಕರಾಳ ವಿಕರಾಳ ರೂಪಗಳು ಹಾಸ್ಯವನ್ನುಂಟು ಮಾಡುತ್ತವೆ. ಗ್ರಿಮ್ ಸೋದರರ "ಕಪ್ಪೆರಾಜ" ಎಂಬ ಕಥೆ

ಯಲ್ಲಿ ರಾಜಕುಮಾರಿಯು ಆಡುವ ಚೆಂಡು ಬಾವಿಯಲ್ಲಿ ಬೀಳು ತ್ತದೆ. ಅದನ್ನು ತೆಗೆಸಲಾರದೆ ಅವಳು ಅಳುವಾಗ ಕಪ್ಪೆ ರಾಜನು "ನನ್ನನ್ನು ನೀನು ಮದುವೆಯಾಗಲೊಪ್ಪಿದರೆ ಚೆಂಡನ್ನು ತೆಗೆದು ಕೊಡುವೆನು" ಎಂದು ಹೇಳಿದನು. ಅವಳು ಚೆಂಡು ತೆಗೆಸ ಲಿಕ್ಕಾಗಿ ಮಾತ್ರ ತೋರಿಕೆಗೆ ಒಪ್ಪಿದಳು. ಆಳಕ್ಕೆ ಮುಳುಗಿ ಚೆಂಡನ್ನು ಕಪ್ಪೆರಾಜನು ತೆಗೆದುಕೊಟ್ಟನು. ಅವಳು ಕಪ್ಪೆ-ರಾಜನ ಭೀತಿಯಿಂದ ಓಡಿಹೋಗಿ ಅರಮನೆ ಸೇರಿದಳು. ಕಪ್ಪೆರಾಜನು ಪೋಷಾಕು ಹಾಕಿಕೊಂಡು ಎರಡು ಕಾಲುಗಳಿಂದ ನಡೆಯುತ್ತ ಬಂದು ಬಾಗಿಲು ತಟ್ಟಿದನು. ರಾಜನು "ಕಪ್ಪೆ ರಾಜನಿಗೆ ಮಾತುಕೊಟ್ಟಂತೆ ಜತೆಯಲ್ಲಿ ಉಣ್ಣಬೇಕು, ಜತೆ ಯಲ್ಲಿ ಮಲಗಬೇಕು" ಎಂದು ಹೇಳಿ ಅವಳಿಗೆ ಕಪ್ಪೆರಾಜನ ಕೈ ಹಿಡಿಸಿದನು. ಹಾಸಿಗೆಯಲ್ಲಿ ಪಕ್ಕದಲ್ಲಿ ಕಪ್ಪೆಯನ್ನು ಅವಳು ಮಲಗಿಸಿಕೊಳ್ಳಬೇಕಾಯಿತು. ಅವಳಿಗೆ ನಿದ್ರೆ ಬಂದಾಗ ಕಪ್ಪೆಯು ಅವಳ ಎದೆಯ ಮೇಲೆ ಹತ್ತಿತು. ಆಗ ಎಚ್ಚತ್ತ ರಾಜಕುಮಾರಿಯು ಹೆದರಿಕೆಯಿಂದ ಚೀರಿ ಅದನ್ನು ಬೀಸಾಡಿ ದಳು. ನೆಲಕ್ಕೆ ಬಿದ್ದಕೂಡಲೆ ಕಪ್ಪೆ ರಾಜಕುಮಾರನಾಗಿ ಪರಿವರ್ತನ ಹೊಂದುತ್ತದೆ !

ಅತಿಶಯೋಕ್ತಿಯು ಹಾಸ್ಯದ ಮತ್ತೊಂದು ವಿಧಾನ. ಗ್ರಿಮ್ ಸೋದರರ "ಜಗತ್ತಿನಲ್ಲಿ ಆರುಜನ" ಎಂಬ ಕಥೆಯಲ್ಲಿ ಅತಿಶಯೋಕ್ತಿಯ ಬಳಕೆ ಸ್ವಾರಸ್ಯವಾಗಿದೆ.

ಅಧಿಕಾರದಿಂದ ಪದಚ್ಯುತನಾದವನೊಬ್ಬನು ಅಡವಿಗೆ ಹೋದಾಗ ಒಬ್ಬ ಮನುಷ್ಯನನ್ನು ನೋಡಿದನು. ಆತನು ಆರು ಮರಗಳನ್ನು ಧಾನ್ಯದ ಪೈರಿನ ಆರು ಎಲೆಗಳನ್ನು ತಿರಿಯುವಷ್ಟು

ಸುಲಭವಾಗಿ ಕಿತ್ತನು. ಅವನನ್ನು ಆಳನ್ನಾಗಿ ಮಾಡಿಕೊಂಡು ಈ ಮನುಷ್ಯನು ಮುಂದೆ ಹೋದನು. ಮುಂದೊಬ್ಬನು ಕೋವಿ ಹಿಡಿದುಕೊಂಡು ಎರಡು ಮೈಲುಗಳ ಮೇಲೆ ಮರದ ಮೇಲಿದ್ದ ನೊಣದ ಕಣ್ಣಿಗೆ ಗುರಿ ಹೊಡೆಯುವದರಲ್ಲಿದ್ದನು! ('ಆಕಾಶ ದಲ್ಲಿದ್ದ ನೊಣಕ್ಕೆ ಗುರಿ ಹೊಡೆಯುವಂಥ ರಾಕೆಟ್ಟುಗಳು ತಪ್ಪುತ್ತಲ್ಲಿವೆ!' ಎಂದು ಕ್ರುಶ್ಚೇವ್ ಹೇಳಿದ್ದರು.) ಅವನನ್ನೂ ಜತೆಗೆ ಕರೆದುಕೊಂಡು ಮುಂದೆ ಹೋದರೆ ಏಳು ಗಾಳಿಯಂತ್ರ ಗಳು ಗಾಳಿಯಿಲ್ಲದೆ ತಿರುಗುತ್ತಿದ್ದವು. ಮುಂದೆ ಅಲ್ಲಿಂದ ಎರಡು ಮೈಲು ಹೋದಾಗ ಅಲ್ಲೊಬ್ಬನು ಒಂದು ಮೂಗಿನ ಹೊರಳೆ ಯನ್ನು ಮುಚ್ಚಿಕೊಂಡು ಇನ್ನೊಂದರಿಂದ ಶ್ವಾಸ ಬಿಡಲು, ಎರಡು ಮೈಲಿನ ಮೇಲಿದ್ದ ಗಾಳಿಯಂತ್ರಗಳು ತಿರುಗುತ್ತಿದ್ದವು! ಮುಂದೊಬ್ಬನು ಓಟಗಾರ. ಅವನು ಹಕ್ಕಿ ಹಾರಾಡುವದಕ್ಕಿಂತ ಬೇಗ ಓಡುವನು. ಅದಕ್ಕೇ ಒಂದು ಕಾಲನ್ನು ಕಳಚಿಕೊಂಡು ನಡೆಯುತ್ತಿದ್ದನು!

ಹೀಗೆ ಆ ಕಥೆ ಬುರುಡೆ ಬಿಂದಾಚಾರ್ಯರ ಬುರುಡೆ ಯಿಂದ ಬಂದ ಹಾಗೆ ಸಾಗುತ್ತದೆ!

"ವಿಯೆಟ್‌ನಾಮಿನ ಜಾನಪದ ಕಥೆಗಳು" ಎಂಬ ಗ್ರಂಥ ದಲ್ಲಿ ಗುಂಗಾಡಿನ ಜನ್ಮವನ್ನು ಕುರಿತು ಒಂದು ಕಾಲ್ಪನಿಕ ಕಥೆ ಇದೆ.

ಎನ್‌ಗೋಕ್ ಟಾಮನೆಂಬವನು ನಹಾನದೀಪ ಎಂಬ ಸುಂದರಿಯನ್ನು ಮದುವೆಯಾದನು. ಅವಳು ಬರೆ ಬಣ್ಣದ ಬೀಸಣಿಗೆಯವಳಾಗಿದ್ದಳು, ವೈಯಾರಿಯಾಗಿದ್ದಳು. ಅವಳು ಒಮ್ಮೆ ಅಕಸ್ಮಾತ್ತಾಗಿ ತೀರಿಕೊಂಡಳು. ಅವಳ ಶವವನ್ನು ಕವದ

ಪೆಟ್ಟಿಗೆಯಲ್ಲಿಟ್ಟುಕೊಂಡು ಟಾಮನು ಗುಡ್ಡಕ್ಕೆ ಹೋದನು. ಆದರೆ ಅದನ್ನು ಹುಗಿಯಲು ಮನಸ್ಸು ಬಾರದೇ ಹೋಯಿತು. ಅವನ ದುಃಖವನ್ನು ಕಂಡು ಒಂದು ಭೂತವು ಟಾಮನ ಮೂರು ರಕ್ತಬಿಂದುಗಳನ್ನು ತೆಗೆದುಕೊಂಡು ಅವಳ ಶವದ ಮೇಲೆ ಚೆಲ್ಲಿ ಅವಳನ್ನು ಬದುಕಿಸಿತು. ಆದರೆ ನಹಾನದೀಪಳು ಶ್ರೀಮಂತ ವ್ಯಾಪಾರಿಯೊಬ್ಬನ ಹಡಗಿನಲ್ಲಿ ಓಡಿಹೋದಳು. ಒಂದು ತಿಂಗಳ ಮೇಲೆ ಅವಳನ್ನು ಪತ್ತೆಹಚ್ಚಿದ ಟಾಮನೊಡನೆ ಬರಲು ಅವಳು ಒಡಂಬಡಲಿಲ್ಲ. ಆಗ ಅವಳನ್ನು ಬದುಕಿಸಲು ತಾನು ತನ್ನ ದೇಹದ ರಕ್ತಬಿಂದುಗಳನ್ನು ತೆತ್ತಿರುವದಾಗಿ ಹೇಳಿದನು.

ಅವಳು ''ತಕೊ ನಿನ್ನ ಮೂರು ಬಿಂದು ರಕ್ತವನ್ನು'' ಎಂದು ಹೇಳಿ ತನ್ನ ಕೈಬೆರಳನ್ನು ಕೊಯ್ದುಕೊಂಡು ರಕ್ತ ಬಿಂದುಗಳನ್ನು ಚೆಲ್ಲಿದಳು. ಮೂರು ಬಿಂದು ರಕ್ತಬಿದ್ದಕೂಡಲೆ ಅವಳು ಸತ್ತುಬಿದ್ದಳು.

ಅದೇ ವೈಯಾರಿಯು ಗುಂಗಾಡಿನ ರೂಪವನ್ನು ಪಡೆದಳು. ಅದೇ ಕಾರಣದಿಂದ ಇಂದಿಗೂ ಮನುಷ್ಯನನ್ನು ಅನುಸರಿಸಿಕೊಂಡು ಗುಂಗಾಡು ಮನುಷ್ಯನ ಕಿವಿಯಲ್ಲಿ ಗುಣಗುಣಿಸುತ್ತ ಮೂರು ಬಿಂದು ರಕ್ತವನ್ನು ಕೊಡಬೇಕೆಂದು ಗಾನಗೈಯುತ್ತದೆ. ರಾತ್ರಿಯಲ್ಲೆಲ್ಲ ನಲ್ಲನ ಕಿವಿಯಲ್ಲಿ ನಲ್ಮೆಯ ಪಿಸುಮಾತನ್ನಾಡಿ ಅವನ ರಕ್ತವನ್ನು ಹೀರಿ ಮೋಜುಮಾಡುವ ವೈಯಾರಿಯಂತೆ ಗುಂಗಾಡನ್ನು ಈ ಕತೆಯಲ್ಲಿ ಕಾಣಲಾಗಿದೆ.

ದಿ. ದೇವುಡು ಅನುವಾದಿಸಿದ ‚‚ದೇಶಾಂತರ ಕಥೆಗಳು'' ಎಂಬ ಜಾನಪದ ಕಥಾಸಂಕಲನದಲ್ಲಿ ‚‚ಗೃಧ್ರರಾಜ'' ಎಂಬ

ಕಥೆಯಲ್ಲಿ 'ರಾಜನ ಮಗಳ ರೋಗಕ್ಕೆ ಸೇಬಿನ ಹಣ್ಣೇ ಔಷಧಿ' ಎಂದು ಬೈರಾಗಿಯು ಹೇಳಿರುತ್ತಾನೆ. ಒಬ್ಬ ತೋಟಿಗನು ಸೇಬಿನ ಹಣ್ಣುಗಳನ್ನು ಬುಟ್ಟಿಯಲ್ಲಿಟ್ಟುಕೊಂಡು ಅರಮನೆಗೆ ಬರುವಾಗ ಒಬ್ಬ ಮುದುಕನು ಕೇಳಿದನು. "ಬುಟ್ಟಿಯಲ್ಲಿ ಏನಿದೆ?" ಎಂದು. ತೋಟಿಗನು ಕೋಪಿಸಿ "ಮಂಡರಗಪ್ಪೆ!" ಎಂದನು. ಅರಸನ ಮುಂದೆ ಕೊಳ್ಳಿರೆಂದು ಬುಟ್ಟಿಯನ್ನಿಟ್ಟಾಗ ಅರಸನು ಬುಟ್ಟಿಯಲ್ಲಿ ಕೈ ಹಾಕಲು ಒಳಗಿನ ಮಂಡರಗಪ್ಪೆಯು ಕುಟುಕಿತು. ಅರಸನು "ಹಾ!" ಎಂದು ಹಾರಿದನು. ಮಂಡರ ಗಪ್ಪೆಗಳು ಬುಸುಗುಡುತ್ತ ಈಚೆಗೆ ಬಂದವು. ಅರಸನ ಫಜೀತಿ ಯನ್ನೂ, ತೋಟಿಗನಿಗಾದ ಶಿಕ್ಷೆಯನ್ನೂ ನೆನೆದು ಯಾರಿಗೆ ನಗು ಬರದು?

## ೭. ಜಾನಪದ ಕಥೆಗಳ ಮಹತ್ವ

ಜಾನಪದ ಕಥೆಗಳು ಮುಖ್ಯವಾಗಿ ಮನರಂಜನೆಯ ಸಲುವಾಗಿ ರಚಿತವಾದ ಕಥಾಕೌತುಕಗಳು. ಮನಸ್ಸಿನ ವ್ಯಥೆ ಯನ್ನು ತಾತ್ಕಾಲಿಕವಾಗಿಯಾದರೂ ಪರಿಹರಿಸುವ ಸಂಜೀವಿನಿ ಗುಣವು ಈ ಕಥೆಗಳಲ್ಲುಂಟು. "ಭಾರತದ ಜನಪ್ರಿಯ ಕಥೆಗಳು" ಎಂಬ ಗ್ರಂಥದ ಮುನ್ನುಡಿಯಲ್ಲಿ ಬರೆದಂತೆ "ಕಥೆಯು ಮನುಷ್ಯ ನಿಗೆ ಒಂದು ವಿಶ್ರಾಂತಿಸಾಧನವಾಗಿದೆ. ಮನಸ್ಸಿನ ಬೇಸ ರಗಳನ್ನು ಕಳೆಯಲು ಇದೊಂದು ಮನುಷ್ಯ ಸಮಾಜದಿಂದ ತಯಾರಿಸಲ್ಪಟ್ಟ ಔಷಧಿ. ಇಂದಿಗಾದರೂ ಅವರ [illegible]

ಗುಣಗಳಾಗಲಿ, ಉಪಕಾರವಾಗಲಿ ಕಡಿಮೆಯಾಗಲಿಲ್ಲ. ಅದರ ಉಪಯೋಗವು ಇಂದಿಗೂ ತುಂಬಾ ಪ್ರಯೋಜನಕಾರಿಯಾಗಿದೆ. ಕಥೆಗಳು ಶತಮಾನಗಳಿಂದ ನಮ್ಮ ಮನಸ್ಸನ್ನೊಲಿಸುತ್ತ ಬಂದಿವೆ. ಮನುಷ್ಯನ ಹೃದಯದಲ್ಲಿ ಶಾಶ್ವತವಾಗಿರುವ ಬಾಲ ಭಾವವು ಕಥೆಗಳನ್ನು ಹೇಳುವುದರಿಂದ, ಕೇಳುವುದರಿಂದ ತೃಪ್ತಿ ಹೊಂದುತ್ತದೆ".

ಜಾನಪದ ಕಥೆಗಳಿಂದ ಮನರಂಜನೆಯಾಗುವುದರ ಜತೆಗೆ ತಿಳಿವಳಿಕೆಯು ಬೆಳೆಯುತ್ತದೆ. ಪ್ರತಿಯೊಬ್ಬನು ನೋಡಿದ, ಕೇಳಿದ, ಅನುಭವಿಸಿದ ಸಂಗತಿಗಳು ಅವನ ಮನದ ಮೇಲೆ ಪರಿಣಾಮ ಮಾಡಿ ಅವನ ಬುದ್ಧಿಗೆ ಸಂಸ್ಕಾರವನ್ನು ತರುತ್ತವೆ. ಅದರಲ್ಲಿಯೂ ಬಾಲ್ಯದಲ್ಲಿ ಹಸಿಮಣ್ಣಿನ ಮುದ್ದೆಯಂತಿರುವ ಮನಸ್ಸನ್ನು ತಿದ್ದುವದು ಬಹು ಸುಲಭ. "ಮೂರು ವರ್ಷದ ಬುದ್ಧಿ ನೂರು ವರ್ಷದ ವರೆಗೆ" ಎಂಬ ಗಾದೆಯು ಚಿಕ್ಕವರಾಗಿರುವಾಗಿನ ಕಾಲವು ಮುಂದಿನ ಸ್ವಭಾವದ ಮೇಲೆ ಎಷ್ಟು ಮಟ್ಟಿನ ಪರಿಣಾಮವನ್ನುಂಟುಮಾಡುತ್ತದೆಯೆಂಬುದನ್ನು ಸೂಚಿಸುವದು. ವರ್ಡ್ಸ್‌ವರ್ಥ್ ಕವಿಯು ತನ್ನ 'ಇಂದ್ರಧನುಷ್ಯ' ಎಂಬ ಆಂಗ್ಲ ಕವನದಲ್ಲಿ "ಮಗು ಮಾನವನ ತಂದೆ" ಎಂದು ಮಾರ್ಮಿಕವಾಗಿ ನುಡಿದಿರುವನು. ಚಿಕ್ಕವರಾಗಿರುವಾಗ ಕೇಳಿದ ಹಲವಾರು ಜಾನಪದ ಕಥೆಗಳು ಬಾಲಕರ ಮನಸ್ಸನ್ನು ರೂಪಿಸಿ ಅವರ ಮೇಲೆ ಕೊನೆ ಬಾಳುವ ಪರಿಣಾಮವನ್ನು ಮಾಡುವವೆಂಬುದು ನಿಶ್ಚಿತವಾದ ಮಾತಾಗಿದೆ. ಬಹು ಪಾಲು ಜಾನಪದ ಕಥೆಗಳು ಶುಚಿಯಾದ ಜೀವನದೃಷ್ಟಿಯನ್ನು ಬಿತ್ತರಿಸುವವಾಗಿವೆ. ಈ ಕಥೆಗಳಲ್ಲಿ ಕಳ್ಳರು, ದುಷ್ಟರು, ರಾಕ್ಷಸ ಸ್ವಭಾವದವರು,

ಹೇಡಿಗಳು, ಮೋಸಗಾರರು, ಕ್ಷುಲ್ಲಕರು, ಕ್ರೂರಳಾದ ಮಲತಾಯಿ, ಅತ್ತೆ, ಕ್ರೂರರಾದ ರಾಜರು, ಸ್ವಾರ್ಥದ ಸಲುವಾಗಿ ರಾಜಕುಮಾರರನ್ನೂ, ಸುಕುಮಾರಿಯರಾದ ರಾಜಕುಮಾರಿಯರನ್ನೂ, ಶಿಶುಗಳನ್ನೂ ಬಲಿಕೊಡುವ ಮಾಂತ್ರಿಕರು, ಹೀಗೆ ಭಯಭೀತಿಯನ್ನು ಹುಟ್ಟಿಸುವ ವ್ಯಕ್ತಿಗಳ ಪ್ರಪಂಚವಿದ್ದರೂ ಬಹುತರ ಎಲ್ಲ ಕಥೆಗಳಲ್ಲಿ ಒಳ್ಳೆಯವರಿಗೆ ಮೊದಲಿಗೆ ಕಷ್ಟವಾದರೂ ಕಡೆಗೆ ಕಷ್ಟ ಪರಿಹಾರವಾಗಿ ದುಷ್ಟ ಶಕ್ತಿಗಳ ವಿರುದ್ಧ ಅವರು ಜಯ ಪಡೆಯುತ್ತಾರೆ. ಧೈರ್ಯವೂ ಬುದ್ಧಿವಂತಿಕೆಯೂ ಇದ್ದರೆ ಯುಕ್ತಿಯಿಂದ ಪ್ರಚಂಡ ಶಕ್ತಿಯುಳ್ಳ ರಾಕ್ಷಸರನ್ನೂ, ಭೂತಗಳನ್ನೂ ಮಾಂತ್ರಿಕರನ್ನೂ ಪ್ರಬಲರಾದ ಇತರ ದುಷ್ಟರನ್ನೂ ಜಯಿಸಬಹುದು ಎಂಬ ಭಾವನೆಯು ಈ ಕಥೆಗಳನ್ನು ಓದುವದರಿಂದ ಆಗುತ್ತದೆ.

ನಿರ್ದಯಿ ಶ್ರೀಮಂತರ ವಿರುದ್ಧ ತಿರಸ್ಕಾರವುಂಟಾಗುತ್ತದೆ. ಬಡವರ ಕುರಿತು ಸಹಾನುಭೂತಿಯುಂಟಾಗುತ್ತದೆ. "ರಷ್ಯದ ಕಿನ್ನರ ಕಥೆಯು ಸೈನಿಕನಾಗಲಿ, ರೈತನಾಗಲಿ, ಯಾವಾಗಲೂ ದುರಾಸೆ, ಕ್ರೌರ್ಯದಿಂದ ಕೂಡಿದ ಮಂಕು ಜಮೀನ್ದಾರನಿಗಿಂತ ಒಂದು ಕೈ ಮೇಲು". ಕಷ್ಟದಲ್ಲಿ ಬಿದ್ದವರಿಗೆ ಸಹಾಯ ಮಾಡುವವರು ಪ್ರತ್ಯುಪಕಾರವನ್ನು ಪಡೆದು ತಮ್ಮ ಕಷ್ಟದಿಂದ ಪರಿಹಾರವನ್ನು ಪಡೆಯುತ್ತಾರೆ. ಪ್ರಾಣಿಗಳು ಕೂಡ ಉಪಕಾರಕ್ಕೆ ಪ್ರತ್ಯುಪಕಾರವನ್ನು ಮಾಡುತ್ತವೆ. ದುಷ್ಟರಾದ ಮಾಂತ್ರಿಕರ ಶಕ್ತಿಯನ್ನು ಹಾಳುಮಾಡಿ ಅವರಿಂದ ಒಳ್ಳೆಯ ಜನರಿಗಾಗುವ ಕಷ್ಟ ಪರಿಹಾರ ಮಾಡುವ ಕಿನ್ನರರು ಯಕ್ಷಿಣಿ

ಯರು ಮುಂತಾದ ಮೇಲಿನ ಶಕ್ತಿಗಳು ಬರುವರೆಂದು ನಿರೂಪಿಸುವದರಿಂದ ಮಾನವನಿಗೆ ಶಾಶ್ವತವಾದ ಸತ್‌ಶಕ್ತಿಯ ಕುರಿತು ನಂಬಿಗೆಯುಂಟಾಗುತ್ತದೆ. ಮಾನವನ ಶಕ್ತಿಯ ಕುರಿತ ವಿಶ್ವಾಸವು ಅನೇಕ ಕಥೆಗಳಿಂದ ಸೂಚಿತವಾಗುತ್ತದೆ.

ಪ್ರಾಣಿಗಳು ಮನುಷ್ಯನ ಜೀವನದ ಅವಶ್ಯಕವಾದ ಸಂಗಾತಿಗಳು. ಮನುಷ್ಯನೊಡನೆ ಹೋರಾಡಿ ಅವನನ್ನು ಕೊಲ್ಲುವಾಗ ಅವನಿಂದ ಕೊಲ್ಲಿಸಿಕೊಳ್ಳುವ ಶೂರ ಪ್ರಾಣಿಗಳಂತೆಯೆ ಅವನ ಆಹಾರವಾಗುವ ತರತರದ ಪ್ರಾಣಿಗಳೂ ಉಂಟು. ಪ್ರಾಣಿಗಳೆಂದರೆ ಚಿಕ್ಕಮಕ್ಕಳಿಗೆ ಅಚ್ಚುಮೆಚ್ಚು. ಪ್ರಾಣಿಗಳು ಅವರಿಗೆ ವಿಶೇಷ ಕುತೂಹಲ ಉಂಟು ಮಾಡುತ್ತವೆ. ಅಂಥ ಪ್ರಾಣಿ ಪ್ರಪಂಚದ ಹಲವಾರು ಕಥೆಗಳಲ್ಲಿಯೂ ಕೂಡ ಚಿಕ್ಕ ಮಕ್ಕಳು ಒಳ್ಳೆಯ ಪ್ರಾಣಿಗಳಿಗೆ ದಯೆ ತೋರಬೇಕೆಂಬುದನ್ನು ಕಂಡುಕೊಳ್ಳುವರು. ಮನುಷ್ಯನು ಪ್ರಾಣಿಗಳಿಗೆ ಉಪಕಾರ ಮಾಡಿದರೆ ಬಹುತರವಾಗಿ ಅವುಗಳಿಂದ ಅವನಿಗೆ ಪ್ರತ್ಯುಪಕಾರವಾಗಿ ಅವನ ಕಷ್ಟಪರಿಹಾರವಾಗುವದು, ಎಂಬುದನ್ನು ಹೇಳಿ ದಯಾ ಭಾವನೆಯನ್ನೂ ಉದಾರತನವನ್ನೂ ಕೊಂಡಾಡುವ ಅನೇಕ ಕಥೆಗಳುಂಟು.

“ರಷ್ಯದ ಜಾನಪದ ಕಥೆಗಳು” ಎಂಬ ಶ್ರೇಷ್ಠ ಜಾನಪದ ಕಥನ ಸಂಕಲನಗ್ರಂಥದ ಮುನ್ನುಡಿಯಲ್ಲಿ ಶ್ರೀ. ಡಿ. ಈ. ಪಾಮರಾಂಟ್ಸೇವರು ರಷ್ಯದ ಜಾನಪದ ಕಥೆಗಳ ಶ್ರೇಷ್ಠತೆಯನ್ನು ಮಾರ್ಮಿಕವಾಗಿ ಪ್ರತಿಪಾದಿಸಿದ್ದಾರೆ.

ಪ್ರಾಣಿಗಳು ಪಾತ್ರವಾಡುವ ಕಥೆಗಳ ಕುರಿತು ಅವರು “ಕಾಡುಗಳಲ್ಲಿ ಓಡಾಡಿ, ಮೃಗಗಳನ್ನು ನೋಡಿ. ಪ್ರತಿಮೃಗ

ದಲ್ಲೂ ತನ್ನದೇ ಆದ ಪ್ರತ್ಯೇಕತೆ, ಸ್ವಭಾವಗಳಿದ್ದುದನ್ನು ನೂರಾರು ವರ್ಷಗಳ ಹಿಂದೆಯೇ ಕಂಡುಕೊಂಡಿದ್ದವರು ಅಲ್ಲಿನ ಬೇಟೆಗಾರರು. ಅವರೇ ಈ ಪ್ರಾಣಿಗಳ ಕಥೆಗಳನ್ನು ಕಟ್ಟಿದವರು. ಹಲವು ಮೃಗಗಳ ಧೈರ್ಯವನ್ನು ಕಂಡು ಅವರು ಮೆಚ್ಚಿಕೊಂಡರು. ಇತರ ಪ್ರಾಣಿಗಳ ತಂತ್ರದ ಮನೋಭಾವವನ್ನು ಕಂಡು ನಿಂದಿಸಿದರು. ಈಸೋಪನ ನೀತಿಕಥೆಗಳಂತೆ ಈ ಕಥೆಗಳಲ್ಲಿ ಒಳ ಅರ್ಥಗಳು ಹುದುಗಿರುತ್ತವೆ.ಮಾನವನ ದುರ್ಗುಣ. ದುರಾಸೆ, ಮೋಸ, ಮುಂಕುತನಗಳಂತಹ ದೋಷಗಳನ್ನು ಇವು ಪ್ರತಿಬಿಂಬಿಸುತ್ತವೆ." ಅಷ್ಟೇ ಅಲ್ಲ, ಪ್ರಾಣಿಗಳಲ್ಲಿನ ಒಳ್ಳೆಯ ಗುಣಗಳನ್ನು ಎತ್ತಿ ಹಿಡಿದು ಅವನ್ನೇ ಅನುಕರಿಸುವಂತೆ ಅಪ್ರತ್ಯಕ್ಷವಾದ ಸೂಚನೆ ಕೊಡುತ್ತವೆ ಈ ಕಥೆಗಳು.

ಪಂಚತಂತ್ರದ "ಶಿವಭೂತಿಯು ಕಥೆ'' ಯಂಥ ಕಥೆಯು ಕ್ರೂರ ಪ್ರಾಣಿಗಳು ಕೂಡ ಕ್ರೂರ ಮನುಷ್ಯರಿಗಿಂತ ಮೇಲು; ಅವುಗಳಿಗಾದರೂ ಕೃತಜ್ಞತಾ ಗುಣವಿದೆ, ಎಂದು ಬೋಧಿಸಿ ಕೃತಜ್ಞತೆಯ ಮಹತ್ವವನ್ನು ಇನ್ನಿಷ್ಟು ಸ್ಫುಟಮಾಡುತ್ತದೆ. ಒಂದು ಮಂಗವನ್ನೂ, ಹುಲಿಯನ್ನೂ, ಬೇಡನನ್ನೂ ಬಾವಿಯಿಂದ ಎತ್ತಿ ಜೀವ ಉಳಿಸಿದ ಶಿವಭೂತಿಗೆ ಆ ಪ್ರಾಣಿಗಳು ಉಪಕಾರಕವಾದರೂ ದುಷ್ಟನಾದ ಬೇಡನು ಶಿವಭೂತಿಯು ಕಳ್ಳನೆಂದು ರಾಜನಿಗೆ ಚಾಡಿಹೇಳುತ್ತಾನೆ. ಹಾವು ವಿಭೂತಿಯ ಸಹಾಯಕ್ಕೆ ಬಂದು ರಾಜಕುಮಾರನನ್ನು ಕಚ್ಚಿತು. ಯಾರಿಂದಲೂ ಅವನನ್ನು ಬದುಕಿಸುವದಕ್ಕಾಗದೆ ಶಿವಭೂತಿಯ ಮಂತ್ರದಿಂದಲೇ ರಾಜಕುಮಾರನು ಬದುಕುತ್ತಾನೆ. ಕೃತಘ್ನ ಬೇಡನು ರಾಜನಿಂದ ಮರಣಕ್ಕೆ ಗುರಿಯಾಗುತ್ತಾನೆ.

ಮಲತಾಯಿಯು ಅಸೂಯೆಗೆ ಗುರಿಯಾಗಿ ಕಷ್ಟದಲ್ಲಿದ್ದ ಸಿಂಡರೆಲ್ಲಳಿಗೆ ಯಕ್ಷಿಣಿಯ ಸಹಾಯವು ದೊರೆತು ಅವಳು ರಾಜಕುಮಾರನ ಮಡದಿಯಾಗುತ್ತಾಳೆ. ಎಂಡರಸನ್ನನು ಬರೆದ ಯಕ್ಷಿಣಿ ಕಥೆ "ಸಿಂಡರೆಲ್ಲ" ದಲ್ಲಿ ಸಿಂಡರೆಲ್ಲಳ ಮದುವೆಯಾದ ಮೇಲೆ ಅವಳ ಕ್ಷಮೆ ಕೇಳಿದ ಮಲತಾಯಿಗೆ, ಸೋದರಿಯರಿಗೆ ಉದಾರ ಸಿಂಡರೆಲ್ಲಳ ಕ್ಷಮೆ ದೊರೆಯುತ್ತದೆ. ಆದರೆ ಎಲ್ಲ ದುಷ್ಟರಿಗೂ ಹೀಗೆ ಕ್ಷಮೆ ದೊರೆಯುತ್ತದೆ ಎಂದು ಹೇಳಲಾಗುವದಿಲ್ಲ. ಅದೇ "ಸಿಂಡರೆಲ" ಕಥೆಯನ್ನು ಗ್ರಿಮ್ ಸೋದರರು ಸಂಗ್ರಹಿಸಿದ್ದಾರೆ. ಜಾನಪದ ಕಥೆಯಾಗಿ ಜನರಲ್ಲಿ ಪ್ರಚಾರದಲ್ಲಿ ಇದ್ದ ಆ ಕಥಾಭೇದದಲ್ಲಿ ಸಿಂಡರೆಲ್ಲಳು ರಾಜಕುಮಾರನೊಡನೆ ಚರ್ಚಿನಲ್ಲಿ ಮದುವೆಯಾಗಿ ಹೋಗುವಾಗ ಅವಳ ಬಲಕ್ಕೊಬ್ಬಳು ಮಲತಾಯಿಯ ಮಗಳು, ಎಡಕ್ಕೊಬ್ಬಳು ಬರುವಾಗ ಪಾರಿವಾಳಗಳು ಆ ಸೋದರಿಯರ ಒಂದೊಂದು ಕಣ್ಣನ್ನು ಕಿತ್ತುಬಿಟ್ಟವು.

ವಿಜ್ಞಾನವು ಹಿಂದಿನ ಮೂಢನಂಬಿಕೆಗಳನ್ನು ಸುಳ್ಳು ಮಾಡಿ ತೋರಿಸಿ ಅತಿಶಯ ಅದ್ಭುತಗಳನ್ನು ಮಾಡಿ ತೋರಿಸಿ ತುಂಬ ಪ್ರಭಾವಶಾಲಿಯಾಗಿರುವ ಈ ಕಾಲದಲ್ಲಿ ಈ ಯಕ್ಷಿಣಿ ಕಥೆಗಳು, ಕಿನ್ನರ ಕಥೆಗಳು ವಿಸಂಗತವೆಂದು ತೋರಬಹುದು. ಚಿಕ್ಕ ಮಕ್ಕಳಲ್ಲಿ ಭಯವನ್ನು ಬಿತ್ತಿ ಮೂಢನಂಬಿಕೆಗಳನ್ನು ಹೆಚ್ಚು ಮಾಡುವಲ್ಲಿ ಇವು ಸಹಾಯಕವಾಗುವವೆಂದು ಇಂಥ ಕಥೆಗಳನ್ನು ಬಹಿಷ್ಕರಿಸಬೇಕೆಂದವರೂ ಉಂಟು. ಭೂತಗಳು, ದೆವ್ವಗಳು, ಪಿಶಾಚಿಗಳು, ರಾಕ್ಷಸರು, ದೇವತೆಗಳು, ಯಕ್ಷಿಣಿಯರು ಈ ಅಸತ್ಯ ಸಂಗತಿಗಳಲ್ಲಿ ವಿಶ್ವಾಸವಿಟ್ಟು ಬಾಲಕರು

ಸತ್ಯದೃಷ್ಟಿಯಿಂದ ದೂರವಾದ ವಿಚಿತ್ರ ಮನೋಭೂಮಿಕೆಯನ್ನು ಬೆಳೆಸಿಕೊಳ್ಳುವರೆಂದು ಅನಿಸುವದು ಕೆಲವರಿಗೆ. ಈ ಕಥೆಗಳು ಅಂಧಶ್ರದ್ಧೆಯನ್ನು ಕುದುರಿಸುವವೆಂದು ಅನೇಕರು ತಿಳಿದಿರುವರು. ಆದರೆ ಈ ಕಥೆಗಳಲ್ಲಿ ಬರುವ ಅವಾಸ್ತವ ವ್ಯಕ್ತಿಗಳು, ಘಟನೆಗಳು ಬಾಹ್ಯಜಗತ್ತಿನಲ್ಲಿ ವಾಸ್ತವಿಕವಲ್ಲ ಎಂದು ಇಂದಿನ ಬಾಲಕರು ತಿಳಿದುಕೊಂಡರೂ ಈ ಕಥೆಗಳು ರೂಪಿಸುವ ಅಂತರಜಗತ್ತಿನ (ಭಾವನೆಗಳ) ಸತ್ಯವು ಎಂದಿನಂತೆ ಪರಿಣಾಮಕಾರಿಯಾಗಿದೆ. ಅಲ್ಲದೆ “ಕಾಗೆ ಗುಬ್ಬಿಗಳು ನಮ್ಮಂತೆ ಮಾತಾಡುತ್ತವೆಯೊ ?” ಎಂದು ಚಿಕ್ಕ ಬಾಲಕರು ಪ್ರಶ್ನೆ ಮಾಡಿ ತಮ್ಮ ಚಿಕಿತ್ಸಕ ಬುದ್ಧಿಯನ್ನು ಪ್ರದರ್ಶಿಸುತ್ತಾರೆ. ‘ನಂಬಿ ನಟಿಸು’ ಎಂಬ ಮನೋಭೂಮಿಕೆಯಲ್ಲಿ ಬಾಲಕರು ಕೆಲವು ಕಾಲ ವಿಹರಿಸಿದರೆ ತಪ್ಪೇನಿಲ್ಲ.

“ಕಾಡಿನ ತೀರ ಚಿಕ್ಕಮನುಷ್ಯರು (Elves) ಮೊದಲಿನಂತೆ ಈಗ ವಾಸ್ತವಿಕವಾಗಿ ಕಾಣುವದಿಲ್ಲ; ಆದರೆ ಅದರಿಂದಲೇ ಈ ಕಥೆಗಳು ಹೆಚ್ಚು ಜೀವಂತವಾಗಿವೆ” ಎಂದು ಜೊಸೆಫ್ ಕೆಂಪ್‌ಬೆಲ್ ಹೇಳುತ್ತಾರೆ. “ಘನತೆ ಗೌರವಗಳುಳ್ಳ ಪುರಾಣ ಕಥೆಗಳಿಗಿಂತಲೂ ಮನಸ್ಸಿನ ಆಕರ್ಷಣೆಗಾಗಿಯೇ ರಚಿತವಾಗಿ ಉಳಿದುಬಂದಿರುವ ಈ ಜನಪದ ಕಥೆಗಳು, ಹುಡುಗಾಟಿಕೆಯ ರಚನೆಯ ಪ್ರತೀಕಗಳು, ಹೆಚ್ಚು ಸತ್ಯಯುತವೂ ಬದುಕಿ ಉಳಿಯಲು ಹೆಚ್ಚು ಶಕ್ತಿಯುಳ್ಳವೂ ಆಗಿರುವಂತೆ ಕಾಣುತ್ತದೆ” ಎಂದವರು ಹೇಳುತ್ತಾರೆ.

“ನಂಬಿಕೆಗಳಲ್ಲಿ ಬಾಲಭಾವವುಳ್ಳ ಮಾನವರ ಮನಸ್ಥಿತಿಯ ಕಾಲದ ವಿಚಿತ್ರ, ವಿಕ್ಷಿಪ್ತ ಅವಶೇಷದಂತೆ ಮಾತ್ರ

ಈ ಜಾನಪದ ಕಥೆಯೂ ಉಳಿದಿಲ್ಲ. ಕಥೆಯು ಮಾಟದ ಜಗತ್ತಿ ತೀರ ಮೊದಲಿನಿಂದಲೂ ನಗರಗಳಲ್ಲಿ ಪ್ರಜ್ವಲಿಸಿದಂಥ, ರಕ್ತದಲ್ಲಿ ದುಮುದುಮಿಸಿದಂಥ, ಪಂಚೇಂದ್ರಿಯಗಳನ್ನು ಕಂಗೆಡಿಸಿದಂಥ, ಆಸೆಗಳು, ಹೆದರಿಕೆಗಳು, ಆದರ್ಶಗಳು, ಭವಿತವ್ಯದ ಸಾಧ್ಯತೆಯುಳ್ಳ ಶಕ್ತಿಗಳು, ಇವುಗಳ ಶಾಶ್ವತ ಅಸ್ತಿತ್ವವನ್ನುಳ್ಳ ಮನಸ್ಸಿನಲ್ಲಿ ಆಳವಾಗಿ ಉರಿಯುವ ಜ್ವರಗಳ ಲಕ್ಷಣಗಳನ್ನೊಳಗೊಂಡಿದೆ. ಈ ಮಾನಸಿಕ ಚಟುವಟಿಕೆಯೇ ದಾರ್ಶನಿಕ (Vision) ಜಗತ್ತಿನಲ್ಲಿಯೂ ಮಾನವ ಜನಾಂಗದ ಕಾರ್ಯಗಳಲ್ಲಿಯೂ ಪ್ರವೃತ್ತವಾಗಿದೆ. ಈ ಜಾನಪದ ಕಥೆಗಳಿಂದ ದೇಶಕಾಲಗಳ ವಿಘ್ನಗಳ ವಿರುದ್ಧವಾಗಿ ಹಾಗು ಅವುಗಳ ಮೂಲಕ ನಿರ್ಮಾಣವಾಗುವ ಹೊಸ ಜಗತ್ತಿನ ಸಾಧ್ಯತೆಯ ಮುನ್ನೋಟದ ಪ್ರತೀಕವೇ ಇತಿಹಾಸವಾಗಿದೆ. ”

ಮನೋವೈಜ್ಞಾನಿಕರು ವಿವರಿಸುವ ಸ್ವಪ್ನವಿಜ್ಞಾನದ ಪ್ರಕಾರ ಜಾಗ್ರದವಸ್ಥೆಯ ಆಸೆಗಳು, ಹೆದರಿಕೆಗಳು ಸ್ವಪ್ನದಲ್ಲಿ ಪ್ರತಿಫಲಿಸುತ್ತವೆ. ಅತೃಪ್ತ ಕಾಮನೆಗಳು ಸ್ವಪ್ನದಲ್ಲಿ ಸಫಲವಾಗುತ್ತವೆ. ಈ ಜಾನಪದ ಕಥೆಗಳು ಸ್ವಪ್ನದಿಂದಲೂ ಹಗಲು-ಗನಸಿನಿಂದಲೂ ಬಣ್ಣಪಡೆದ ಸುಂದರ ಸೃಷ್ಟಿಗಳು. ಸ್ವರ್ಗ-ನರಕಗಳು, ದೇವತೆಗಳು, ರಾಕ್ಷಸರು, ಭೂತ ಪಿಶಾಚಿಗಳು ಯಾವ ಮನೋಭೂಮಿಕೆಯಿಂದ ಸೃಷ್ಟವಾದವೊ ಅಂಥದೆ ಮನೋಭೂಮಿಕೆಯು ಈ ಕಥೆಗಳ ರಚನೆಯಲ್ಲಿಯೂ ಕೈವಾಡವನ್ನು ತೋರಿದೆ. ಇಲ್ಲಿಯ ತರುಣಿಯರು ಹೆಚ್ಚಾಗಿ ಸುಂದರಿಯರು. ಕಲ್ಲುಗಳಲ್ಲಿ ಬಂಗಾರವೂ ರತ್ನಗಳೂ ಧಾರಾಳವಾಗಿ ಸಿಗುತ್ತವೆ. ಕಾಮಧೇನು, ಕಲ್ಪವೃಕ್ಷ, ಚಿಂತಾಮಣಿಗಳಂತೆ

ಈ ಕಥೆಗಳ ಮಾಟದ ವಸ್ತುಗಳು ಇಚ್ಛಿಸಿದ ಫಲವನ್ನು ಕೊಡ
ಬಲ್ಲವು. ಜೈನ ಪುರಾಣಗಳ ಭೋಗಭೂಮಿಯಲ್ಲಿ ಮರಗಳಿಂದ
ಸಿದ್ಧವಾದ ಆಹಾರವೂ ತಯಾರಾದ ಪೋಷಾಕುಗಳೂ
ಬರುವಂತೆ ಜಾನಪದ ಕಥೆಗಾರನ ಕಲ್ಪನಾಭೂಮಿಯಲ್ಲಿ
ಅಸಾಧ್ಯಗಳು ಸಾಧ್ಯವಾಗುತ್ತವೆ. ಕಲ್ಪನೆಯು ಸ್ವರ್ಣಮಯನಾದ
ಊರ್ಣನಾಭನು ಚಿನ್ನದ ಎಳೆಗಳನ್ನು ಹೆಣೆಯುತ್ತಾನೆ.

"ಅತಿ ಕೌಶಲಪೂರಿತವೂ, ರಮಣೀಯವೂ ಆದ ಕಥೆ
ಗಳೆಂದರೆ, ಯಂತ್ರ, ಮಾಟದ ವಿಸ್ಮಯಕಾರಿಯಾದ ಕಥೆಗಳು.
ಈ ಕಥೆಗಳಿಗೆ ಕೇವಲ ಕಲ್ಪನೆಯೇ ಆಧಾರವೋ ಎಂದೆನಿಸು
ತ್ತದೆ. ಕೇವಲ ಕಟ್ಟು ಕಥೆಗಳಂತೆ ತೋರುತ್ತವೆ. ಅಜ್ಞಾನ,
ಅಂಧಕಾರಗಳ ಪ್ರತೀಕವಾಗಿ ಕಾಣುವ ಕೊಳ್ಳಿ. ಹನ್ನೆರಡು
ತಲೆಯ ಹಕ್ಕಿ, ಹಾವು, ಮಾಟಗಾತಿ ಬಾಬಾಯಾಗ ಮೊದಲಾ
ದವರೊಡನೆ ಹೋರಾಡುವ ವೀರರಿಗೆ ಯಾವ ಸಾಮಾನ್ಯ ನಿಯ
ಮವೂ ಅನ್ವಯಿಸದು. ಆದರೂ ಇವುಗಳ ಜನನಕ್ಕೆ ಕಾರಣ
ಮಾನವನ ಮನಸ್ಸಿನಲ್ಲಿನ ಕನಸು ಮಾತ್ರ. ಆ ಕನಸಿನ
ಮನಸ್ಸುಗಳ ವೀರರು ತಮಗೆ ಪ್ರಿಯರಾದ ಆದರ್ಶವ್ಯಕ್ತಿಗಳ
ಪ್ರತಿಮೂರ್ತಿಗಳು. ಅವರಿಗೆ ಭಯವೆಂಬುದಿಲ್ಲ. ಅವರು
ಧೀರರು. ಉದಾತ್ತರು. ಸದಾ ದುಷ್ಟಶಕ್ತಿಯನ್ನು ಗೆದ್ದೇ
ಗೆಲ್ಲುತ್ತಾರೆ. ದುಷ್ಟಶಕ್ತಿಗಳೆದುರು ಹೋರಾಡುವಾಗ ಅವರಿಗೆ
ಜಾರ ವ್ಯಾಸಿಲಿಸಾ, ಸುಂದರಿ ಎಲೆನಾರಂತಹ ಮಂತ್ರಶಕ್ತಿ
ಯನ್ನು ಪಡೆದಿರುವ ಸ್ತ್ರೀಯರ ಬೆಂಬಲವಿದ್ದೇ ಇರುತ್ತದೆ.

"ಇಲ್ಲಿನ ನಾಯಕರಿಗೆ ಅದ್ಭುತಶಕ್ತಿಯ ಕಂದುಕುದುರೆ,
ತೋಳ, ನಾಯಿ, ಬೆಕ್ಕು, ಮೀನು, ಇಂತಹವುಗಳೇ ಸಹಾಯ

ಕರು. ಕಥೆಗಳ ವೀರರು ಮಂತ್ರದ ವಸ್ತುಗಳನ್ನು ಉಪಯೋಗಿಸುತ್ತಾರೆ. ಈ ವಸ್ತುಗಳ ಕಲ್ಪನೆಯು, ಮಾನವನು ಪ್ರಕೃತಿಯ ಶಕ್ತಿಗಳನ್ನು ಜಯಿಸಿ, ಅವುಗಳಿಂದ ತನ್ನ ಕಾರ್ಯವನ್ನು ಮಾಡಿಸಿಕೊಳ್ಳಬೇಕೆಂದು ಬಹಳ ಕಾಲದಿಂದಲೂ ಆರಿಸುತ್ತಿದ್ದನೆಂಬುದನ್ನು ತಿಳಿಸುತ್ತದೆ.

"(ಹಲವು ವೀರರ ಕಥೆಗಳ) ನಾಯಕರಾದ ವೀರರು ಧೈರ್ಯದಿಂದಲೂ, ನಿಸ್ವಾರ್ಥತೆಯಿಂದಲೂ ತಮ್ಮ ತಾಯ್ನಾಡಿಗಾಗಿ ಕಾದಾಡುತ್ತಾರೆ.

"ಆ ವೀರರು ಬೀರುವ ಮೋಹಕತೆಯನ್ನು ತಡೆಯಲು ಯಾರಿಂದಲೂ ಸಾಧ್ಯವಿಲ್ಲ. ಆ ಭಾಷಾಶೈಲಿಯ ಮಾಧುರ್ಯವನ್ನು ಸವಿಯದಿರಲು ಯಾರಿಂದಲೂ ಸಾಧ್ಯವಾಗದು. ದೇಶ-ಭಕ್ತಿ, ಸತ್ಯದ ಶಕ್ತಿ, ಬರಲಿರುವ ಕಾಲದಲ್ಲಿ ಸುಖ ಬರುವದೆಂಬ ಭರವಸೆ, ದುಷ್ಟಶಕ್ತಿಗಳನ್ನು ಗೆಲ್ಲುವ ಸುಶಕ್ತಿಗಳ ಸಂದೇಶಗಳನ್ನು ಬೀರುವ ಈ ಕಥೆಗಳಲ್ಲಿನ ಶಕ್ತಿಗೆ ಎದುರಾಗಿ ಹೋಗಲು ಯಾರಿಗೂ ಸಾಧ್ಯವಾಗದು. ಆದ್ದರಿಂದಲೇ ಇವುಗಳನ್ನೋದುವದರಿಂದ ದೊಡ್ಡವರಿಗಾಗುವ ಆನಂದ ಮಕ್ಕಳಿಗಾಗುವ ಆನಂದಕ್ಕಿಂತ ಕಡಿಮೆಯದೇನಲ್ಲ." —ಡಿ.ಈ.ಪಾಮರಾಂಟ್ಸೇವ್.

ಆದರ್ಶಗಳನ್ನು ಕುರಿತು, ಆದರ್ಶ ವೀರರನ್ನು ಕುರಿತು, ಆದರ್ಶ ನಾರಿಯರನ್ನು ಕುರಿತು ಸಹಾನುಭೂತಿಯುಂಟಾಗುವಂತೆ ರಚಿತವಾದ ಈ ಕಥೆಗಳು ಬಾಲಕರ ಮೇಲೆ ಸುಪರಿಣಾಮವನ್ನುಂಟು ಮಾಡುತ್ತವೆ. ಅವರಲ್ಲಿ ಆತ್ಮವಿಶ್ವಾಸವನ್ನು ಹೆಚ್ಚಿಸುತ್ತವೆ. ಶಿವಾಜಿಯು ಚಿಕ್ಕವನಿದ್ದಾಗ ಜೀಜಾಬಾಯಿಯು ಇತಿಹಾಸ ಪುರಾಣಗಳ ಕಥೆಯನ್ನು ಹೇಳಿ ಶಿವಾಜಿಯಲ್ಲಿ ಶೌರ್ಯ-

ಧೈರ್ಯ ಪ್ರತಾಪಾದಿ ಗುಣಗಳಿಗೆ ಅಂಕುರಾರ್ಪಣವನ್ನು ಮಾಡಿದಲೆಂದು ನಾವು ಓದುತ್ತೇವೆ. ಬಹುಸಂಖ್ಯೆಯ ಜಾನಪದ ಕಥೆಗಳು ಅಪ್ರತ್ಯಕ್ಷವಾಗಿ ಆದರ್ಶಗಳ ಸೂಚನೆಯನ್ನೇ ಮಾಡುತ್ತವೆ.

## ಕುರುಡ ಭಿಕ್ಷುಕನ ಕಥೆ

ಚೀನೀ ಜಾನಪದ ಕಥೆ "ಕುರುಡ ಭಿಕ್ಷುಕ" ಎಂಬುದು ಮನುಷ್ಯನ ಒಳ್ಳೆಯತನ ಹಾಗೂ ಕೆಟ್ಟತನದ ವೈಷಮ್ಯವನ್ನು ಚನ್ನಾಗಿ ತಿಳಿಸುತ್ತದೆ. ಲೋಸನ್ ಎಂಬ ಕುರುಡ ಹುಡುಗನನ್ನು ಅವನ ತಂದೆಯು ಮನೆಯಿಂದ ಹೊರಗೆ ಹಾಕಿರುತ್ತಾನೆ. ಫ್ಯಾನ್ ಎಂಬ ನಾಯಿಯು ಹೊರತು ನಂಟಿಗಸ್ತಗೆಳೆಯರೆ ಅವನಿಗೆ ಇರಲಿಲ್ಲ. ನಿದ್ದೆಯಲ್ಲಿದ್ದಾಗ ಕನಸು ಬಿದ್ದಿತು ಅವನಿಗೆ. ಅದರಲ್ಲಿ ಯಕ್ಷಿಣಿಯು ಕಾಣಿಸಿಕೊಂಡು "ಒಳ್ಳೆಯ ಕಾರ್ಯವನ್ನು ನೀನು ಮಾಡಿದ ಸರತಿಗೊಮ್ಮೆ ನಿನಗೆ ಕಣ್ಣಲ್ಲಿ ಅಷ್ಟು ಬೆಳಕು ಬರುವದು. ಮತ್ತೆ ಎಂದಾದರೊಮ್ಮೆ ಕ್ರೂರನಾದಾಗ ಕತ್ತಲೆ ಕವಿದೀತು" ಎಂದು ಹೇಳಿ ಹೋಗಿರುತ್ತಾಳೆ.

ದಾರಿಯಲ್ಲಿ ಕುಂಟನೂ ಕುರುಡನೂ ಆದ ಮುದಿ ಭಿಕ್ಷುಕನೊಬ್ಬನಿಗೆ ಲೋಸನ್ ತಾನು ಬೇಡಿ ತಂದಿದ್ದ ಚಿಕ್ಕ ನಾಣ್ಯವನ್ನು ಕೊಟ್ಟನು. ಆಗ ಕಣ್ಣು ಸ್ವಲ್ಪ ಕಾಣತೊಡಗಿತು. ಮತ್ತೊಮ್ಮೆ ರೋಗಿಷ್ಠ ಮುದುಕಿಗೆ ತನ್ನ ಊಟದ ರೊಟ್ಟಿಯ ತುಣುಕನ್ನು ಕೊಟ್ಟಾಗ ಮತ್ತೆ ಅವನ ಕಣ್ಣುಗಳಿಗೆ ಹುಣ್ಣಿವೆ ಚಂದ್ರನ ಬೆಳಕು ಕಾಣಿಸಿತು.

ಘ್ಯಾನ್ ನಾಯಿಯು ಒಬ್ಬನ ಕೋಳಿಯನ್ನು ಹಿಡಿದು ಲೋಸನ್ನನಿಗೆ ತಂದುಕೊಟ್ಟಿತು. ಲೋಸನ್ನನಿಗೆ ಕೆಲವು ದಿನ ಗಳ ಆಹಾರ ಸಿಕ್ಕಿತೆಂದು ಆನಂದವಾಯಿತು. ಆ ಕೋಳಿ ಯನ್ನು ಮಾರಿದಾಗ ಮತ್ತೆ ಕಣ್ಣು ಕಾಣದಾಯಿತು.

ಆ ಕೋಳಿಯು ಕಳವಿನ ವಸ್ತು; ಅದನ್ನು ತಾನು ಸ್ವೀಕರಿಸಿದುದು ತಪ್ಪು ಎಂದು ಅನಿಸಿದಾಗ ಲೋಸನ್ ಆ ಕೋಳಿಯ ಮಾಲೀಕನನ್ನು ಭೆಟ್ಟಿಯಾಗಿ ಅವನಿಗೆ ತನ್ನ ನಾಯಿಯು ಅದನ್ನು ಮುರಿದು ಕೊಂದಿತೆಂದು ಹೇಳಿ ಅದರ ಸಲುವಾಗಿ ಬೆಲೆಯ ಹಣವನ್ನು ಕೊಟ್ಟನು. ಆಗ ಅವನಿಗೆ ಮತ್ತೆ ಜಗತ್ತು ಕಾಣತೊಡಗಿತು.

ನೀರಿನಲ್ಲಿ ಮುಳುಗಿದ ಮನುಷ್ಯನನ್ನೆತ್ತಲು ತನ್ನ ಪ್ರೀತಿಯ ನಾಯಿ ಘ್ಯಾನ್‌ನ್ನು ಕಳಿಸಿದಾಗ ಅದು ತಾನು ಮಡಿ ದಾದರೂ ಆ ಮನುಷ್ಯನನ್ನು ಬದುಕಿಸಿತು. ಆಗ ಅವನಿಗೆ ಕಣ್ಣುಗಳು ಚನ್ನಾಗಿ ಕಾಣಿಸಿದವು. ಆತನು ತನ್ನ ಪ್ರೀತಿಯ ನಾಯಿಗಾಗಿ ಬಹು ಶೋಕಮಾಡಿದನು. ಕಣ್ಣು ಕಾಣ ನುತ್ತಿದ್ದ ಮಗನನ್ನು ತಂದೆಯು ಮರಳಿ ಕರೆದುಕೊಂಡು ಹೋದನು.

“ಭಾರತದ ಜನಪ್ರಿಯ ಕಥೆಗಳು” ಎಂಬ ಸಂಗ್ರಹದಲ್ಲಿ ಜನಪ್ರಸಿದ್ಧ ಕಥೆಯ ಆಧಾರದಿಂದ ಶ್ರೀಮತಿ ಶಾಂತಾ ಗುಪ್ತಾ ಎಂಬವರು ಬರೆದ “ಅಧಡಾ” ಎಂಬ ಕಥೆಯಲ್ಲಿ “ಅಧಡಾ” ಎಂಬುವನು ಎಲ್ಲ ಅವಯವಗಳು ಅರ್ಧವಾಗಿ (ಒಂದು ಕಣ್ಣು, ಅರ್ಧ ತಲೆ, ಒಂದು ಕಾಲು ಇತ್ಯಾದಿ) ಆ ಹೆಸರನ್ನು ಹೊಂದಿ ದ್ದನು. ಆತನು ರಾಜಕುಮಾರನಾದರೂ ಆತನ ಕ್ಷುಲ್ಲಕತನದ

ಪ್ರತೀಕವಾಗಿ ಬಹಳ ಚಿಕ್ಕ ದೇಹದವನು. ಅವನು ತಾಯಿಯ ಸಲುಗೆ ಹೆಚ್ಚಾದಂತೆ ಗರ್ವಿಷ್ಠನೂ ಆದನು.

ಆತನು ಬೂದಿಯೂ, ಗಾಳಿಯೂ, ಬೆಂಕಿಯೂ ಸಹಾಯ ಮಾಡಲು ಕೇಳಿಕೊಂಡಾಗ ಸಹಾಯ ಮಾಡದೆ ಮುಂದೆ ಹೋದನು. ರಾತ್ರಿ ತಣ್ಣನೆಯ ಗಾಳಿಯು ಹೊಡೆತ ತಿಂದು, ಬೆಳಗಾಗುವಷ್ಟರಲ್ಲಿ ಅವನ ಅಹಂಕಾರದ ಪ್ರತೀಕವಾಗಿ ಅವನೊಂದು ಅರ್ಧ ಅವಯವಗಳುಳ್ಳ ಹುಂಜವಾದನು.

ರಾಜನ ಅಡಿಗೆಯವನು ಅವನನ್ನು ಹಿಡಿದು ನೀರಿನ ಪಾತ್ರೆಯಲ್ಲಿ ಹಾಕಿ ಬೇಯಿಸಲು ಒಲೆಯ ಮೇಲೆ ಇಟ್ಟನು. ಹಿಂದೆ ಆತನು ನೀರು, ಗಾಳಿ, ಬೆಂಕಿಗಳಿಗೆ ಸಹಾಯ ಮಾಡದೆ ಹೋದವನಾದುದರಿಂದ ಆತನು ಬೆಂಕಿಯಲ್ಲಿ ಬೆಂದುಹೋದನು. ಹೀಗೆ ಕಷ್ಟದಲ್ಲಿದ್ದವರಿಗೆ ಉಪಕಾರ ಮಾಡದಿದ್ದವರ ಪರಿಣಾಮವನ್ನು ಈ ಕಥೆಯಲ್ಲಿ ಸೂಚಿಸಲಾಗಿದೆ.

ಜಾನಪದ ಕಥೆಗಳು ಶ್ರೇಷ್ಠ ಸಾಹಿತ್ಯಕ್ಕೆ ಮಾತೃಕೆಗಳಾಗಿ ಅವುಗಳ ಬೆಳವಣಿಗೆಯಲ್ಲಿ ಮುಖ್ಯವಾದ ಸ್ಫೂರ್ತಿ ಹಾಗು ಸಹಾಯವನ್ನೊದಗಿಸುತ್ತವೆ. "The voice of the people is the voice of the Gods" "ಜನವಾಣಿಯೇ ದೇವವಾಣಿ" ಎಂದು ಒಬ್ಬ ಆಂಗ್ಲ ವಿದ್ವಾಂಸನು ನುಡಿದಿದ್ದಾನೆ. ಪೂಜ್ಯ ಶ್ರೀ ಬಿ. ಎಂ. ಶ್ರೀಯವರು "ಜನವಾಣಿ ಬೇರು, ಕವಿವಾಣಿ ಹೂವು" ಎಂಬ ಮಾತಿನಲ್ಲಿ ಜಾನಪದ ಸಾಹಿತ್ಯದ ಮಹತ್ವವನ್ನು ತಿಳಿಸಿದುದುಂಟು.

"ರಷ್ಯದ ಹಿರಿಯ ಲೇಖಕರು, ಅತ್ಯುತ್ತಮ ಕಲಾವಿದರು, ಮಹಾ ಕವಿಗಳು ಎಲ್ಲರೂ ಸ್ಫೂರ್ತಿಗಾಗಿ ಈ ಕಥೆ

ಗಳ ಮೊರೆಹೊಕ್ಕಿದ್ದಾರೆ. ಅಷ್ಟು ಕಾವ್ಯ ಮೋಹಕತೆಯಿದೆ ಈ ಕಥೆಗಳಲ್ಲಿ........ ಎಷ್ಟು ರಮಣೀಯವಾಗಿವೆ ಈ ಕಥೆಗಳು! ಪ್ರತಿಯೊಂದೂ ಒಂದೊಂದು ಕಾವ್ಯ " ಎಂದು ರಷ್ಯದ ಮಹಾ ಕವಿ ಪುಷ್ಕಿನ್ ರಷ್ಯಾ ಜಾನಪದ ಕಥೆಗಳನ್ನು ಹೊಗಳಿದ್ದಾನೆ.

ಬೃಹತ್ಕಥೆಯ ಅನೇಕ ಕಥೆಗಳು ಭಾಸನ ನಾಟಕ, ಹರ್ಷನ ನಾಟಿಕೆಗಳು, ಶೂದ್ರಕನ ಮೃಚ್ಛಕಟಿಕ, ಹಾಗೂ ಇತರ ವೀಣಾವಾಸವದತ್ತಾ ಮೊದಲಾದ ನಾಟಕಗಳಿಗೂ ಬೇತಾಳ ಪಂಚವಿಂಶತಿ ಕಥೆಗಳು, ಪಂಚತಂತ್ರದ ಕಥೆಗಳು ಹಾಗು ಇತರ ಅಸಂಖ್ಯ ಜಾನಪದ ಹಾಗೂ ಉಳಿದ ರೀತಿಯ ಸಾಹಿತ್ಯಗಳ ಪ್ರಕಾರಗಳಿಗೂ ಪ್ರತ್ಯಕ್ಷವಾಗಿಯೂ ಅಪ್ರತ್ಯಕ್ಷ ವಾಗಿಯೂ ಸ್ಫೂರ್ತಿಯನ್ನಿತ್ತಿವೆ. ಬೃಹತ್ಕಥೆಯ ಸುಮನರಾಜನ ಕಥೆಯು ಬಾಣ ಕವಿಯ ಅದ್ಭುತವಾದ ಕಾದಂಬರೀ ರಚನೆಗೆ ಮೂಲ ಸಾಮಗ್ರಿಯನ್ನೊದಗಿಸಿತು.

ಶೇಕ್ಸ್‌ಪಿಯರನ ಶ್ರೇಷ್ಠ ನಾಟಕವಾದ " ಕಿಂಗ ಲಿಯರ್ " ಜಾನಪದ ಕಥೆಯನ್ನೇ ತೆಗೆದುಕೊಂಡು ಅದನ್ನು ಅದ್ಭುತವಾದ ದುರಂತ ನಾಟಕವನ್ನಾಗಿ ಬೆಳೆಸಿದ ಪವಾಡವಾಗಿದೆ. ಆತನ ನಾಟಕಗಳಲ್ಲಿ ಬರುವ ಪೆಸ್ಟೊರಲ್ (ಹುಲ್ಲುಗಾವಲು) ದೃಶ್ಯ ಗಳ ಸೌಂದರ್ಯಕ್ಕೆ ಜಾನಪದ ಜೀವನ ಹಾಗೂ ಕಥೆಗಳು ಸಹಾಯಮಾಡಿವೆ. ಆತನ "ಮೆಕ್ಬೆತ್" ಎಂಬ ದುರಂತ ನಾಟಕ ದಲ್ಲಿನ ಮೂವರು ಯಕ್ಷಿಣಿಯರು ಹಾಗು ಬೆಂಕೋವಿನ ಭೂತ ಇವು ಜಾನಪದ ಕಥಾ ಸಾಹಿತ್ಯದ ವರ್ಚಸ್ಸಿನಿಂದ ಪ್ರತಿಭೆಯು ರೂಪಿಸಿದ ಕಲ್ಪನಾ ವಿಲಾಸಗಳೇ ಆಗಿವೆ. ಕೋಲರಿಜ್ ಕವಿಯ "ಏನ್ಶಂಟ ಮ್ಯಾರಿನರ" ಕೀಟ್ಸ ಕವಿಯ 'ಲಾಬೆಲ್

ಡೇಮ್ ಸೇನ್ಸ್ ಮರ್ಸಿ", ಸರ್ ವಾಲ್ಟರ್ ಸ್ಕಾಟ್‌ನ ಕಥನ ಕವನಗಳೂ ಯೇಟ್ಸ್ ಕವಿಯ ಕೆಲವು ನಾಟಕಗಳೂ ಕಥನ ಕವನಗಳೂ, ಬೊಕೆಶಿಯೋನ ಪ್ರಸಿದ್ಧವಾದ ಕಥೆಗಳೂ ಇನ್ನೂ ಅಸಂಖ್ಯ ಕೃತಿಗಳೂ ಜಾನಪದ ಕಥೆಗಳ ವಸ್ತುಗಳನ್ನು ತೆಗೆದುಕೊಂಡು ರಚಿಸಿದ ಕೃತಿಗಳೇ ಆಗಿವೆ. ಸ್ಪೆನ್ಸರನ ಫೇರಿ ಕ್ವೀನ ಕೂಡ ಈ ಪ್ರಭಾವಕ್ಕೆ ಒಳಗಾದ ಕಾವ್ಯವೇ ಆಗಿದೆ.

ಗ್ರೀಕ ಪುರಾಣಗಳ ಕಥೆಗಳಲ್ಲಿ ಅನೇಕ ಕಥೆಗಳು ಮೂಲ ದಲ್ಲಿ ಜಾನಪದ ಕೃತಿಗಳೇ ಆಗಿದ್ದು ಅನೇಕ ಶ್ರೇಷ್ಠ ನಾಟಕ ಗಳಿಗೂ ಆಧುನಿಕವಾದ ಹಲವಾರು ಹೊಸ ಕೃತಿಗಳಿಗೂ ಮೂಲ ವಸ್ತುಗಳಾಗಿವೆ.

ಎಲಿಯಾಸ್ ಲೋನ್‌ರೋಟ್ (೧೮೦೨-೧೮೮೪) ಎಂಬ ಫಿನ್‌ಲಂಡದ ಒಬ್ಬ ಡಾಕ್ಟರನು ಅನೇಕ ಫಿನ್ನಿಶ್ ಭಾಷೆಯ ಲಾವಣಿಗಳನ್ನೂ ಜಾನಪದ ಕಥೆಗಳನ್ನೂ ಸಂಗ್ರಹಿ ಸಿದ್ದನು. ವೈನ ಮೊಯಿನೆನ್, ಇಲ್ ಮರಿನೆನ್, ಲೆಮಿಂ ಕೈನೆನ್, ಕುಲ್ಲೆರ್ವೋ ಮೊದಲಾದ ಐತಿಹಾಸಿಕ ದಂತಕಥೆ ಗಳ ವೀರರ ಚರಿತ್ರೆಗಳನ್ನು ಸಂಗ್ರಹಿಸಿ ಅವನ್ನು ಶಕ್ಯವಿ ದ್ದಷ್ಟು ಸೂತ್ರಬದ್ಧವಾಗಿ ಹೆಣೆದು ಕಾವ್ಯರೂಪವಾಗಿ ಬರೆದನು. ಅದು ಫಿನ್‌ಲಂಡದ ರಾಷ್ಟ್ರೀಯ ಮಹಾಕಾವ್ಯವಾಗಿ "ಕಾಲೇ ವಲ" 'ವೀರರ ನಾಡು' ಎಂಬುದಾಗಿ ಪ್ರಸಿದ್ಧವಾಗಿದೆ.

ವರ್ಣನಾತ್ಮಕವಾದುಕ್ಕಿಂತ ಹೆಚ್ಚಾಗಿ ದಾರ್ಶನಿಕ ರೀತಿಯ ಪ್ರಭೆಯುಳ್ಳ ಶ್ರೇಷ್ಠ ಸಾಹಿತ್ಯ ಕೃತಿಗಳಾಗಿ ಪ್ರಬುದ್ಧ ಪ್ರತಿಭೆಯ ಗಾಜಿನಲ್ಲಿ ಸೋಸಿ ಬಂದ ಆಧುನಿಕ ಕಾಲದಲ್ಲಿನ ಸಾಹಿತ್ಯ ಕೃತಿಗಳಲ್ಲಿ ಶಿಶುಸಾಹಿತ್ಯ-ಬಾಲಸಾಹಿತ್ಯದ ಮೂಲ

ದ್ರವ್ಯವು ಮತ್ತೆ ಪ್ರಕಟವಾಗುವದನ್ನು ಕಾಣುವೆವು. ವೆಗ್ನರನ "ಓಪೆರಾ"ಗಳು, ಸ್ಟ್ರಿಂಡಬರ್ಗ್, ಇಬ್‌ಸೆನ್ನರ ಪ್ರತೀಕರೂಪವಾದ (Symbolic) ನಾಟಕಗಳು, ಮೆಲ್‌ವಿಲ್ ಬರೆದ "ಮೋಬಿಡಿಕ್" ಎಂಬ ಶ್ರೇಷ್ಠ ಕಾದಂಬರಿ ಹಾಗು ಸ್ಪೆನ್ಸರನ "ಯಕ್ಷಿಣಿ ರಾಣಿ" ಇತ್ಯಾದಿ ಕೃತಿಗಳಲ್ಲಿ ಯಕ್ಷಿಣಿ ಕಥೆಗಳು ಹೊಸ ಉಡುಪಿನಲ್ಲಿ ಮರಳಿಬಂದಿರುವದನ್ನು ಗುರುತಿಸಬಹುದು.

ಜೇಮ್ಸ್ ಜಾಯ್ಸ್, ಫ್ರಾಂಝ್ ಕಾಫ್ಕಾ, ಥಾಮಸ್ ಮ್ಯಾನ್ ಮೊದಲಾದವರ ಕೃತಿಗಳಲ್ಲಿ ಪ್ರತಿಭಾಸಂಪನ್ನರು ಮಾನವೀಯ ಚಿತ್ರಕತೆ (Fantasy) ಯನ್ನು ಹೊಸ ರೂಪ ಹಾಗು ರಚನೆಗಳಿಗೆ ಅಳವಡಿಸಿಕೊಳ್ಳುವದನ್ನು ಕಾಣಬಹುದು.

ಜಾನಪದ ಕಥಾರೂಪಕ್ಕೆ ತನ್ನ ವಿಶಿಷ್ಟವಾದ ಅಮರವಾದ ಕಾಣಿಕೆ ಸಲ್ಲಿಸಿದವನು ಡೆನ್ಮಾರ್ಕಿನ ಹ್ಯಾನ್ಸ ಕ್ರಿಶ್ಚನ್ ಎಂಡರಸನ್. ಮೂವತ್ತೇಳು ಗ್ರಂಥಗಳಲ್ಲಿ ಪಸರಿಸುವ ಅವನ ಜಾನಪದ ಕಥೆಗಳು ಅವನ ಕವಿಹೃದಯವನ್ನೂ ಮೃದುಭಾವನೆಗಳನ್ನು ಚಿತ್ರಿಸುವ ಕೌಶಲವನ್ನೂ ಕನಸುಗಾರಿಕೆಯನ್ನೂ ಚೆನ್ನಾಗಿ ಪ್ರಕಟಗೊಳಿಸಿವೆ.

## ೮. ಕನ್ನಡದ ಜಾನಪದ ಕಥೆಗಳು

ಕನ್ನಡ ಭಾಷೆಯಲ್ಲಿ ಜಾನಪದ ಗೀತೆಗಳನ್ನು ಸಂಗ್ರಹಿಸುವ ವಿಷಯದಲ್ಲಿ ಮಾಡಿದ ಪ್ರಯತ್ನದ ನೂರರಲ್ಲೊಂದು ಪಾಲು ಪ್ರಯತ್ನವನ್ನೂ ಜಾನಪದ ಕಥೆಗಳ ಸಂಕಲನಕ್ಕಾಗಿ

ಮಾಡಲಾಗಿಲ್ಲ. ಆದರಿಂದ ಕನ್ನಡದ ಜಾನಪದ ಕಥೆಗಳು ಎಷ್ಟು ವಿಪುಲ ಸಂಖ್ಯೆಯಲ್ಲಿವೆ, ವೈವಿಧ್ಯಪೂರ್ಣವಾಗಿವೆ ಎಂಬುದು ನಮ್ಮ ಜನರಿಗೆ ತಿಳಿದಿಲ್ಲ. ನಮ್ಮಲ್ಲಿ ಹೆಚ್ಚಾಗಿ ಗ್ರಂಥರೂಪವಾಗಿ ಅಚ್ಚಾದ ಪುಸ್ತಕಗಳು ಸಂಸ್ಕೃತ ಅಥವಾ ಇತರ ಭಾಷೆಗಳಿಂದ ಅನುವಾದ ಹೊಂದಿದವು. ಬತ್ತೀಸಪುತ್ತಳಿ ಕಥೆಗಳು, ಕಥಾಮೃತ, ಅಕಬರ ಬೀರಬಲ್ಲರ ಕಥೆಗಳು, ಭಟ್ಟಿ ವಿಕ್ರಮಾದಿತ್ಯರ ಕಥೆಗಳು, ಕಥಾಸರಿತ್ಸಾಗರ, ಅರೇಬಿಯನ್ ನೈಟ್ಸ್ ಕಥೆಗಳು, ಬೇತಾಳ ಬೊಂಬೆಯ ಕಥೆಗಳು, ಹಾತೀಮ ತಾಯಿಯ ಕಥೆಗಳು, ಮದನಮಂಜರಿ, ಮದನರಾಜನ ಕಥೆಗಳು, ರತ್ನಮಂಜರಿ, ಶುಕಸಪ್ತತಿ ಕಥೆಗಳು, ಶೃಂಗಾರ ಶುಕಸಪ್ತತಿ ಕಥೆಗಳು, ಬೊಕೆಶಿಯೋನ ಕಥೆಗಳು, ಗ್ರಿಮ್ ಸೋದರರ ಹಲವು ಕಥೆಗಳು, ಈಸೋಪನ ನೀತಿ ಕಥೆಗಳು, ಪಂಚತಂತ್ರದ ಕಥೆಗಳು, ಹಿತೋಪದೇಶದ ಕಥೆಗಳು, ಕೆಲವು ಎಂಡರ್‌ಸನ್ನನ ಕಥೆಗಳು, 'ಭಾರತದ ಜಾನಪದ ಕಥೆಗಳು' ಸಂಕಲನ ಗ್ರಂಥ, ಭಾರತದ ಜನಪ್ರಿಯ ಕಥೆಗಳು, ದೇಶ ವಿದೇಶದ ಕಥೆಗಳು, ಅಲ್ಲಿ ಇಲ್ಲಿಯ ಕಥೆಗಳು, ಮುಂತಾಗಿ ಬಹುತರವಾಗಿ ಎಲ್ಲ ದೊಡ್ಡ ಗ್ರಂಥಗಳೂ ಅನುವಾದಗಳೇ ಆಗಿವೆ.

ಎಲ್ಲೋ ಕೆಲವು ಬಾಲಸಾಹಿತ್ಯದ ಗ್ರಂಥಗಳು ಸ್ವತಂತ್ರ ಕಥೆಗಳ ಸಂಗ್ರಹಗಳಾಗಿಯೂ ಬಿಡಿಯಾಗಿಯೂ ಅಚ್ಚಾಗಿವೆ. ಈ ದಿಶೆಯಲ್ಲಿ ಕೊಡಿಯಾಲ ಬೈಲಿನ ಬಾಲಸಾಹಿತ್ಯಮಂಡಲದವರೂ ಬೆಂಗಳೂರಿನ ಹಾಗು ಧಾರವಾಡದ ಕೆಲವು ಪ್ರಕಾಶನಕಾರರೂ ಕೆಲವು ಪುಸ್ತಕಗಳನ್ನು ಪ್ರಕಟಿಸಿರುವರು. ಮತ್ತಿತರ

ಕಡೆಗಳಲ್ಲಿಯೂ ಹಲವಾರು ಬಾಲಸಾಹಿತ್ಯದ ಗ್ರಂಥಗಳು ಕಾಣ ಬರುವವು. ಪ್ರೌಢರನ್ನೂ ತುಂಬ ಕೌಶಲದಿಂದ ರಂಜಿಸಬಲ್ಲಂಥ ಪ್ರೌಢ ಜಾನಪದ ಕಥೆಗಳು ಕಡಮೆ. ದಿ. ಎಂ. ಎಸ್. ಪುಟ್ಟಣ್ಣನವರು ಬರೆದ "ಪೇಟೆ ಮಾತೇನಜ್ಜೀ ?" ಎಂಬಂಥ ಸ್ವತಂತ್ರ ಜಾನಪದ ಕಥೆಗಳು ಕನ್ನಡ ಸಾಹಿತ್ಯದಲ್ಲಿ ಹೆಚ್ಚಾಗಿ ಸಂಗ್ರಹವಾಗಿ ಬೆಳಕು ಕಾಣಬೇಕಾದದ್ದು ಅಗತ್ಯವಾಗಿದೆ.

ಪ್ರಾಚೀನ ಕನ್ನಡ ಸಾಹಿತ್ಯದ ವಡ್ಡಾರಾಧನೆಯು ಕಥೆಗಳು, ವೃತ್ತವಿಲಾಸನ ಧರ್ಮಪರೀಕ್ಷೆಯು ಕಥೆಗಳು ಹಾಗು ದುರ್ಗಸಿಂಹನ ಪಂಚತಂತ್ರ, ಬತ್ತೀಸ ಪುತ್ತಳಿ ಕಥೆ ಮುಂತಾದವು ಅನುವಾದ ಗ್ರಂಥಗಳೇ ಆಗಿವೆ. ನಯಸೇನನ ಧರ್ಮಾಮೃತದಲ್ಲಿನ ದರ್ಶನದ ಕಥೆ, ಚಂದ್ರಹಾಸನ ಕಥೆಯನ್ನು ಹೋಲುವ ಶ್ರೀದತ್ತಶೆಟ್ಟಿಯ ಕಥೆ, ಪ್ರಮಾಥಿಕುಮಾರನ ಕಥೆ ಮುಂತಾದವು ಸ್ವತಂತ್ರವೋ ಅಥವಾ ಇತರ ಭಾಷೆಗಳ ಜೈನ ಸಾಹಿತ್ಯದ ಬೇರೆ ಬೇರೆ ಕಥೆಗಳಿಂದ ಆರಿಸಿಕೊಂಡದ್ದೋ ಎಂಬುದು ಗೊತ್ತಾಗಿಲ್ಲ. ಅದು ಸಂಶೋಧನೆ ಮಾಡಲು ತಕ್ಕ ವಿಷಯವಾಗಿದೆ.

'ಇಂತಹ ಜನಪದ ಕಥೆಗಳ ಸಂಗ್ರಹ ಲೋಕದ ಎಲ್ಲ ಭಾಷೆಗಳಲ್ಲೂ ಹೇರಳವಾಗಿವೆ. ಕನ್ನಡದಲ್ಲೇನೂ ಅಂತಹ ಹೆಚ್ಚಾಗಿಲ್ಲ,' ಎಂದು "ದೇಶವಿದೇಶದ ಜನಪ್ರಿಯ ಕಥೆಗಳು" ಗ್ರಂಥದ ಮುನ್ನುಡಿಯಲ್ಲಿ ಶ್ರೀಮತಿ ಗೌರಮ್ಮ ಕೆ.ಬಸವಯ್ಯ ಎಂಬ ಲೇಖಿಕೆ ಹೇಳುತ್ತಾರೆ. ಕನ್ನಡ ಜನತೆಯಲ್ಲಿ ಕಥೆಗಳ ರಾಶಿಯೇನೋ ಬೇಕಾದಷ್ಟಿದೆ. ಅದನ್ನು ಸಂಗ್ರಹಿಸಿ ಪೇಟೆಗೆ ತಂದವರಿಲ್ಲ; ಅಷ್ಟೇ.

ಉತ್ತರ ಕನ್ನಡ ಜಿಲ್ಲೆಯಲ್ಲಿ ಉತ್ತಮವಾದ ಜಾನಪದ ಕಥೆಗಳ ಬೆಳೆ ಹುಲುಸಾಗಿದೆ. ಆ ಚಿನ್ನದ ತೆನೆಗಳನ್ನು ಕೂಡಿಸಿ ಕನ್ನಡ ಶಾರದೆಯ ಕಣಜವನ್ನು ತುಂಬುವ ಕೊಯಿಲಿನವರು ಇಂದು ತುಂಬ ಅಗತ್ಯವಾಗಿದ್ದಾರೆ. ಹಲವಾರು ಉತ್ತಮ ಜಾನಪದ ಕಥೆಗಾರರು. ಕಥೆಗಾರ್ತಿಯರು ನಮ್ಮ ಜಿಲ್ಲೆಯಲ್ಲಿ-ದ್ದಾರೆ.

ಅಂಥವರಲ್ಲಿ ನಮ್ಮ ಮಾವಜ್ಜನ ಮನೆಯ ನನ್ನ ಮುತ್ತಜ್ಜಿಯೂ ಒಬ್ಬಳು. ಅವಳು ಬಹು ಸ್ವಾರಸ್ಯವಾದ ಕಥೆಗಳನ್ನು ತಲೆಯಲ್ಲಿ ತುಂಬಿಕೊಂಡು ಸಾವಿರಾರು ಚಿಕ್ಕಮಕ್ಕಳಿಗೂ ದೊಡ್ಡವರಿಗೂ ಬಿತ್ತರಿಸಿದ ನಡೆದಾಡುವ ಹೊತ್ತಿಗೆಯಾಗಿದ್ದಾಳೆ. ಅವಳಿಗೀಗ ಬಹುಶಃ ಎಂಬತ್ತೊಂಬತ್ತನೆಯ ವರ್ಷ ನಡೆಯುತ್ತಿದೆ. "ನಿನ್ನ ವಯಸ್ಸೆಷ್ಟು?" ಎಂದು ನಾನು ಕೇಳಿದಾಗ ಅವಳು "ನನಗೆ ಗೊತ್ತಿಲ್ಲ"ಎಂದು ಮೊದಲಿಗೆ ಹೇಳಿದಳು. ನಂತರ "ನಮ್ಮ ಅವರು(ಪತಿ) ಎಂಬತ್ತನೆಯ ವಯಸ್ಸಿನಲ್ಲಿ ತೀರಿಕೊಂಡರು. ನನಗೂ ಅವರಿಗೂ ಹನ್ನೆರಡು ವರ್ಷ ಅಂತರ ಬಿತ್ತು.ಅವರು ತೀರಿ ಇಂದಿಗೆ ಹತ್ತೊಂಬತ್ತು ವರ್ಷಗಳಾದವು" ಎಂದು ಹೇಳಿದಳು. ಅಂದರೆ ಪತಿ ತೀರಿಕೊಂಡಾಗ ಅವಳಿಗೆ ಎಪ್ಪತ್ತು ವರ್ಷಗಳಾಗಿದ್ದವು. ಅದಕ್ಕೆ ಹತ್ತೊಂಬತ್ತು ವರ್ಷಗಳನ್ನು ಕೂಡಿಸಿದರೆ ಅವಳ ಈಗಿನ ವಯಸ್ಸು ಎಂಬತ್ತೊಂ-ಬತ್ತು. ಆಕೆಯ ಇಹಜೀವನದ ಕೊನೆಯಾದ ಮೇಲೆ ಈ ಕಥೆಗಳು ಆಕೆಯು ಹೇಳುವಂತೆ ಸ್ವಾರಸ್ಯವಾಗಿ ನಿರೂಪಿತವಾಗುವ ಸಂಭವ ಕಡಿಮೆ ಎಂಬುದು ನಿಶ್ಚಿತವಾದದ್ದು. ಆ ಕಥೆಗಳನ್ನು ಬರೆವಣಿಗೆಯಲ್ಲಿ ಕಾದಿಡುವದೇ ಮುಖ್ಯವಾಗಿ ಈಗ ಆಗಬೇಕಾದ

ಕೆಲಸವೆಂದು ನಾನು ಆಕೆಯು ಹೇಳುತ್ತ ಹೋದಂತೆ ಹೇವು ಕಥೆಗಳನ್ನು ಬರೆದುಕೊಳ್ಳುತ್ತ ಬಂದೆನು. ಆ ಕಥೆಗಳು ಹಾಸ್ಯ ದೃಷ್ಟಿಯಲ್ಲಿಯೂ ಕಲ್ಪನೆಯ ಚಮತ್ಕಾರದಲ್ಲಿಯೂ ಉತ್ತಮ ಮಟ್ಟದ್ದಾಗಿರುವವಲ್ಲದೆ ಹಳೆಯ ಪರಂಪರೆಯನ್ನು ಮೂಡಿಸಿದ ವಿಶಿಷ್ಟ ಕಥೆಗಳಾಗಿವೆ.

ನನ್ನ ಮುತ್ತಜ್ಜಿಯು ಹೆಗಡೆಗ್ರಾಮದ ಹಲಸುಮಾವಿನ ದಿ. ಮಂಜ ಹೆಗಡೆಯವರ ಧರ್ಮಪತ್ನಿ. ಏಳನೆಯ ವಯಸ್ಸಿನಲ್ಲಿ ಅವಳ ಮದುವೆಯಾಯಿತು. ಅವಳು ಶ್ರೀ ಸತ್ಯನಾರಾಯಣ ಮಂಜಹೆಗಡೆ ಅವರ ತಾಯಿ. ಶ್ರೀ ಮಂಜಹೆಗಡೆಯವರು, ನನ್ನ ದೊಡ್ಡಜ್ಜನವರು, ತುಂಬಾ ಕಥೆಗಳನ್ನು ಹೇಳುವವ ರಾಗಿದ್ದರು. ಅವರಿಂದ ಚಿಕ್ಕಂದಿನಲ್ಲಿ ನಾನು ಅನೇಕ ಕಥೆ ಗಳನ್ನು ಕೇಳಿರುವೆನು. ಆದರೆ ನಮ್ಮ ಮುತ್ತಜ್ಜಿಯಾದ ಗಂ। ಭಾ। ಭಾಗೀರಥಿ ಮಂಜಹೆಗಡೆ ಇವರಿಗೆ ಅವರು ಹೇಳುವ ಕಥೆಗಳು ಅವರ ತಂದೆಯವರಾದ ದಿ. ರಾಮಭಟ್ಟ (ಉಪ್ಪಿನ ಪಟ್ಟಣ) ರಿಂದ ಬಂದವುಗಳಾಗಿವೆ. ಶ್ರೀ ರಾಮ ಭಟ್ಟರು ಅಡಿಕೆಸಿಪ್ಪೆ ಸುಲಿಯುವಾಗ ಕುಳಿತ ಜನರಿಗೆ ರಾತ್ರಿಯ ಬೇಸರ ಪರಿಹರಿಸಲು ಕಥೆ ಹೇಳುವದು ವಾಡಿಕೆಯಾಗಿತ್ತು. ರಾತ್ರಿ ಊಟ ಮುಗಿಸಿ ಸುಮಾರು ಒಂಬತ್ತು ಗಂಟೆಗೆ ಅಡಿಕೆ ಸುಲಿಯುತ್ತಿದರೆ, ಹನ್ನೆರಡು ಗಂಟೆ, ಒಂದು ಗಂಟೆ, ರಾತ್ರಿಯ ವರೆಗೂ ಆ ಕೆಲಸ ಸಾಗುವದು ಸಾಮಾನ್ಯವಾಗಿದೆ. ಆ ಸಮಯ ದಲ್ಲಿ ರಾಮಭಟ್ಟರು ಒಂದೊಂದು ಕಥೆಯನ್ನು ಸ್ವಾರಸ್ಯವಾಗಿ ಎರಡು ಮೂರು ಗಂಟೆಗಳವರೆಗೂ ವಿಸ್ತಾರಮಾಡಿ ಹೇಳು ತ್ತಿದ್ದರು. ತಂದೆಯ ಬಾಯಿಂದ ಕೇಳಿದ್ದ ಕಥೆಯನ್ನು ಮರು

ದಿನ ಸಂಜೆಯ ಹೊತ್ತಿಗೆ ಅವರ ಮಗಳು ಏಳು ವರ್ಷಕ್ಕಿಂತ ಕಿರಿಯ ವಯಸ್ಸಿನ ಭಾಗೀರಥಿ ತಂದೆಗೆ ಮರಳಿ ಹೇಳಬೇಕು. ಹೀಗೆ ನೂರಾರು ಕಥೆಗಳನ್ನು ದಿ. ಶ್ರೀ ರಾಮಭಟ್ಟರು ಹೇಳಿ ಮಗಳಿಗೂ ಆ ಕಥೆಯನ್ನು ಹೇಳುವ ಕಲೆಯನ್ನು ಕಲಿಸಿ ಕೊಟ್ಟರು.

ನಮ್ಮ ಮುತ್ತಜ್ಜಿಯವರು ಲಗ್ನವಾಗಿ ಬಂದು ಇಂದಿಗೆ ಎಂಬತ್ತೆರಡು ವರ್ಷಗಳಾದವು. ಶ್ರೀ ರಾಮಭಟ್ಟರು ಅದಕ್ಕಿಂತ ಎಷ್ಟೋ ವರ್ಷಗಳ ಹಿಂದಿನಿಂದ ಅವರು ಹೇಳಿದ ಕಥೆಗಳಲ್ಲಿ ಹಲವನ್ನು ಬಲ್ಲವರಾಗಿರಬೇಕು. ಅಂದರೆ ಕನಿಷ್ಠ ನೂರು ವರ್ಷ ಗಳ ಹಿನ್ನೆಲೆ ಈ ಕಥೆಗಳಿಗಿದೆ ಎಂದು ಹೇಳಬಹುದು. "ಜಕ್ಕಾ ಬುರ್ಡೆ ಜಾಬುರ್ಡೆ", "ಬಟ್ಟಿನಲ್ಲಿ ಪುಣ್ಯವಿದ್ದರೆ ಬೆಟ್ಟದಲ್ಲಿ ಮನೆ ಕಟ್ಟಿಕೊಂಡೇನು", "ಪದ್ಮಾವತಿ ಸೂಳೆಯ ಕಥೆ" ಇವು ಬೇರೆ ಕಡೆಯ ಜಾನಪದ ಕಥೆಗಳ ಹೋಲಿಕೆಯುಳ್ಳ ಕಥೆಗಳಾ ಗಿದ್ದು ಅಷ್ಟು ಹಿಂದೆಯೇ ಶ್ರೀ ರಾಮಭಟ್ಟರ ಕಥೆಗಳ ಜೋಳಿಗೆ ಯಲ್ಲಿದ್ದವು. "ಪದ್ಮಾವತಿಯ ಕಥೆ" ವಿಕ್ರಮಾದಿತ್ಯನ "ರೂಪ ಸುಂದರಿ" (ಅಥವಾ ಕಮಲಾ) ಎಂಬ ವೇಶ್ಯೆಯ ಕಥೆಯಂತೆಯೆ ಇದೆ.

ದಕ್ಷಿಣ ಕನ್ನಡದ ಮಕ್ಕಳ ಕಥೆಗಳಲ್ಲಿ "ಗುಡುಗುಡು ಗುಮ್ಮಟದೇವರು" ಎಂಬ ಬಹು ಜನಪ್ರಿಯ ಕಥೆಯು ಅಚ್ಚಾಗಿ ಪ್ರಚಾರದಲ್ಲಿದೆಯಷ್ಟೇ ? ಬೆಕ್ಕಿನ ಮರಿಯು ಅಜ್ಜಿಯ ಮನೆಗೆ ಹೊರಟಿತ್ತು. ದಾರಿಯಲ್ಲಿ ಸಿಕ್ಕ ಕಾಡು ಪ್ರಾಣಿಗಳಿಂದ ತಪ್ಪಿಸಿ ಕೊಳ್ಳಲು ಒಂದೊಂದಕ್ಕು 'ತಿರುಗಿ ಬರುವಾಗ ಕೊಬ್ಬಿ ಬಂದು ನಿನ್ನ ಆಹಾರವಾಗುತ್ತೇನೆ' ಎಂದು ವಚನವಿತ್ತು ಹೋಗುತ್ತದೆ.

ಆದು ಮರಳಿ ಬರುವಾಗ ಢೋಲಿನಲ್ಲಿ ಕುಳಿತು ಉರುಳುತ್ತ ಬರುವಾಗ ಅಲ್ಲಿ ಕಾದು ಕುಳಿತಿದ್ದ ಹುಲಿ ಕರಡಿ ಇತ್ಯಾದಿ ಪ್ರಾಣಿಗಳು ಕೇಳಲು "ಗುಡುಗುಡು ಗುಮ್ಮಟದೇವರು, ದಾರಿ ಬಿಡಿ" ಎಂದು ತಪ್ಪಿಸಿಕೊಂಡು ಹೋಗುತ್ತ ಜಾಣಸರಿಯನ್ನು ಮೋಸಗೊಳಿಸಲಾರದೆ ಆದರೂ ಓಡಿ ಜೀವವುಳಿಸಿಕೊಂಡು ಬಂದಿತು. ಈ ಕಥೆಯನ್ನು "Rub a Dub Gummat Kay!" ಎಂದು ಇಂಗ್ಲಿಷಿನಲ್ಲಿಯೂ ಭಾಷಾಂತರಿಸಿದ್ದಾರೆ. ಅಂತಹದೆ ಕಥೆಯು "ಜಕ್ಕಾಬುರ್ಡೆ ಜಾಬುರ್ಡೆ" ಎಂಬ ಹೆಸರಿನಿಂದ ಶ್ರೀ ರಾಮಭಟ್ಟರಿಂದ ನಮ್ಮ ಮುತ್ತಜ್ಜಿಯವರಿಗೆ ಪಿತ್ರಾರ್ಜಿತ ವಾಗಿ ಬಂದು ಈ ಕಡೆಯಲ್ಲಿ ಪ್ರಚಾರದಲ್ಲಿದೆ. ಅದರಲ್ಲಿ "ಜಕ್ಕಾ ಬುರ್ಡೆ ಜಾಬುರ್ಡೆ, ಚೆಕ್ಕಣ್ಣನನ್ನ ಕಂಡಿದ್ದೀಯಾ ?" ಎಂದು ಕೇಳಿದ ಪ್ರಾಣಿಗಳಿಗೆ ಬುರುಡೆಯ ಒಳಗಿದ್ದ ಬೆಕ್ಕಿನ ಮರಿಯು ಹೀಗೆ ಉತ್ತರ ಕೊಡುತ್ತದೆ. ''ಚೆಕ್ಕಣ್ಣನನ್ನೂ ಕಾಣಲಿಲ್ಲ; ತುಕ್ಕಣ್ಣನನ್ನೂ ಕಾಣಲಿಲ್ಲ !"

ಶೇಕ್ಸ್‌ಪಿಯರನು ತನ್ನ ''ಕಿಂಗ್ ಲಿಯರ್" ಎಂಬ ನಾಟಕದಲ್ಲಿ ಅದ್ಭುತವಾಗಿ ರಚಿಸಿದ ಮುದಿರಾಜನ ಕಥೆಯಲ್ಲಿ '' ಯಾರನ್ನು ಹೆಚ್ಚು ಪ್ರೀತಿಸುತ್ತೀರಿ ?" ಎಂದು ತಂದೆ ಕೇಳಿದು ದಕ್ಕೆ ''ನಿನ್ನನ್ನೆ ಹೆಚ್ಚು ಪ್ರೀತಿಸುತ್ತೇವೆ''ಂದು ಗೊನೆರಿಲ್ ಮತ್ತು ರೇಗನ್ ಎಂಬ ಹಿರಿ ಹೆಣ್ಣುಮಕ್ಕಳು ಉತ್ತರ ಕೊಡು ತ್ತಾರೆ. ಕಿರಿಯ ಮಗಳು ಕಾರ್ಡೆಲಿಯಾಳು ''ನಾನು ಮದುವೆ ಯಾದಂದು ನನ್ನ ಪ್ರಿಯ ಪತಿಯನ್ನೆ ಹೆಚ್ಚು ಪ್ರೀತಿಸುತ್ತೇನೆ. ತಂದೆಯನ್ನು ಎಷ್ಟು ಪ್ರೀತಿಸಬೇಕೋ ಅಷ್ಟೇ ನಿನ್ನನ್ನು ಪ್ರೀತಿಸು ತ್ತೇನೆ. ಹೆಚ್ಚೂ ಅಲ್ಲ; ಕಡಿಮೆಯೂ ಅಲ್ಲ" ಎಂದು ಪ್ರಾಮಾ

ಣೆಕವಾಗಿ ಉತ್ತರ ಕೊಡುತ್ತಾಳೆ. ಅದಕ್ಕೆ ಕುಪಿತನಾಗಿ ತಂದೆಯು ಅವಳನ್ನು ಬಡವನಿಗೆ ಮದುವೆ ಮಾಡಿ ರಾಜ್ಯದ ಪಾಲು ಕೊಡದೆ ಹೊರಹಾಕುತ್ತಾನೆ.

ಅದೇ ಕಥೆಯು ಜಾನಪದ ಕಥಾಪರಂಪರೆಯಲ್ಲಿಯೂ ಬೇರೊಂದು ಬಗೆಯಾಗಿ ಇದ್ದಿರಬೇಕು. "ಹೊಟ್ಟೆನಲ್ಲಿ ಪುಣ್ಯ ವಿದ್ದರೆ ಬೆಟ್ಟದಲ್ಲಾದರೂ ಮನೆ ಕಟ್ಟಿಕೊಂಡಿರುತ್ತೇನೆ" ಎಂಬ ಕಥೆಯಲ್ಲಿ ಅಜ್ಜಿಯ ಕಥೆಗಳಿಗೆ ಸಾಮಾನ್ಯವಾಗಿರುವಂತೆ ಒಳ್ಳೆಯ ಸ್ವಭಾವದವರಿಗೆ ಮೊದಲು ಎಷ್ಟು ಕಷ್ಟಬಂದರೂ ಕೊನೆಗೆ "ಎಲ್ಲರೂ ಸುಖಸಂತೋಷದಲ್ಲಾಳಿದರು" ಎಂದು ಸುಖಾಂತವಾಗಿ ಮುಗಿಯುತ್ತದೆ. ಆದರೆ ನಾಟಕದಲ್ಲಿನ ಕಾರ್ಡೆಲಿಯಾಳ ಮರಣ ಹಾಗು ಲಿಯರನ ಹುಚ್ಚು ಈ ಕಥೆ ಯಲ್ಲಿರುವದಿಲ್ಲ. ರಾಜನ ಪ್ರಶ್ನೆಗೆ ಕಿರಿಮಗಳು "ಹೊಟ್ಟೆನಲ್ಲಿ ಪುಣ್ಯವಿದ್ದರೆ ಬೆಟ್ಟದ ಮೇಲಾದರೂ ಮನೆ ಕಟ್ಟಿಕೊಂಡಿರು ತ್ತೇನೆ" ಎಂದು ಉತ್ತರ ಕೊಡುತ್ತಾಳೆ. ಫಲವಾಗಿ ರೋಗಿಷ್ಠ ನಾದ ದರಿದ್ರನಿಗೆ ಮದುವೆಮಾಡಿ ಅವಳನ್ನು ರಾಜನು ಹೊರ ಹಾಕುತ್ತಾನೆ.

ಹೊನ್ನಾವರ ತಾಲೂಕಿನಲ್ಲಿ ಪ್ರಚಾರದಲ್ಲಿರುವ "ಲಕ್ಕಡ ಪಕ್ಕಡ" ಎಂಬ ಕಥೆಗೂ ಆ ಕಥೆಗೂ ಕೆಲವಂಶಗಳಿಂದ ಸಾಮ್ಯ ವುಂಟು. ಭೇದವೂ ಉಂಟು. ಇಲ್ಲಿಯೂ ಮೇಲಿನಂತೆಯೇ ರಾಜಕುಮಾರಿಯು ಉತ್ತರಕೊಟ್ಟು ಭಿಕ್ಷುಕನ ಮಡದಿಯಾಗಿ ಕಷ್ಟಪಡುತ್ತಾಳೆ. ಆತನು ಇಲ್ಲಿ ತೀರ ಅಸಹ್ಯರೋಗಿಷ್ಠನಾಗಿ ದ್ದನು. ರಾಜನು ಅವನಿಗೆ ಕನ್ಯಾದಾನಮಾಡಲು ಧಾರೆ ನೀರು ಬಿಡುವಾಗ ಆತನಿಗೆ ಅಸಹ್ಯಪಟ್ಟುಕೊಂಡು ದೂರದಿಂದ

ನೀರನ್ನು ಚೆಲ್ಲುವಾಗ ಉದ್ದವಾದ ತಾಮ್ರದ ಹರಿಣೆ(ಕೊಳವೆ) ಯ ಮೂಲಕ ಆ ನೀರು ವರನ ಕೈಯಲ್ಲಿ ಬೀಳುವಂತೆ ವ್ಯವಸ್ಥೆ ಮಾಡುತ್ತಾನೆ ! ಬೇರೆ ಕಥಾಚಮತ್ಕಾರವೂ ಈ ಪಾಠಾಂತರ ದಲ್ಲಿದೆ. ರಾಜನಿಗೆ ಬುದ್ಧಿ ಕಲಿಸಲು ಈ ಭಿಕ್ಷುಕನ ವೇಷಧಾರಿ ಯಾದ ಅಳಿಯನು(ರಾಜಕುಮಾರ) ಕಟ್ಟಿಗೆ ತರುವ ಸೇವಕನ ವೇಷದಲ್ಲಿ ರಾಜನ ಸೇವೆಯಲ್ಲಿ ನಿಲ್ಲುತ್ತಾನೆ. ಪರಮೇಶ್ವರನು ಆತನಿಗೆ ಅನುಗ್ರಹ ಮಾಡಿ ಕೆಲವು ಶಕ್ತಿಗಳನ್ನು ಕೊಟ್ಟಿರು ತ್ತಾನೆ. ಆತನು ''ಲಕ್ಕಡ'' ಎಂದು ಹೇಳಿದ ಕೂಡಲೆ ವಸ್ತು ಗಳು ಒಂದಕ್ಕೊಂದು ಕೂಡಿಹೋಗುತ್ತವೆ. ''ಪಕ್ಕಡ'' ಅಂದರೆ ಬಿಡಿಬಿಡಿಯಾಗಿ ಬಿಟ್ಟುಹೋಗುತ್ತವೆ. ಕಟ್ಟಿಗೆಯನ್ನು ಕಡಿದು ರಾಶಿ ಹಾಕಿ "ಲಕ್ಕಡ" ಎಂದ ಕೂಡಲೆ ಕಟ್ಟಿಗೆಗಳು ಕೂಡಿ ಹೋಗಿ ಹೊರೆಕಟ್ಟುವದೂ ಕೂಡ ಬೇಕಾಗದೆ ಹೊತ್ತುಕೊಂಡು ಹೋಗುವದಕ್ಕೆ ಆಗುತ್ತಿತ್ತು. "ಪಕ್ಕಡ" ಎಂದು ಹೊರೆಯನ್ನು ನೆಲಕ್ಕೆ ಚಲ್ಲಿದಾಗ ಹೇಳಿದರೆ ಕಟ್ಟಿಗೆಗಳು ಬೇರೆ ಬೇರೆಯಾಗು ತ್ತಿದ್ದವು. ಎರಡನೆಯ ರಾಜಕುಮಾರಿಯ ಲಗ್ನದಲ್ಲಿ ವರನು ವಧುವಿನ ಕೈಹಿಡಿಯುವಾಗ ''ಲಕ್ಕಡ" ಎಂದು ಆತ ಹೇಳಿದನು. ವರನ ಕೈ ವಧುವಿನ ಕೈಗೆ ಅಂಟಿಕೊಂಡುಬಿಟ್ಟಿತು! ರಾಜನು ಅಳಿಯನ ಹಾಗು ಮಗಳ ಕೈ ಬಿಡಿಸಲು ಮಗಳ ಕೈ ಹಿಡಿದು ಎಳೆಯುವಾಗ ರಾಜನ ಕೈ ಮಗಳ ಕೈಗೆ ಬಿಡಿಸಲಾರದಂತೆ ಅಂಟಿಹೋಗುತ್ತದೆ; ರಾಣಿಯು ರಾಜನ ಎಡಹೆಗಲನ್ನು ಮುಟ್ಟಿ ಕೊಂಡಿದ್ದಳು. (ಹಸ್ತಮುಟ್ಟುವದು ಎಂದು ಈ ವಿಧಿಗೆ ಹೇಳುತ್ತಾರೆ)· ಅವಳೂ ರಾಜನ ಹೆಗಲಿನಿಂದ ತನ್ನ ಕೈಯನ್ನು ಬಿಡಿಸಿಕೊಳ್ಳಲಾರದಾದಳು; ಹೀಗೆ ಅಂಟಿದ ನಂತರ ದೊಡ್ಡ

ಸಾಲೇ ಆಗಿಹೋಯಿತು ! ರಾಜನು ಈ ಬಂಧನವನ್ನು ಬಿಡಿಸಿ ದವರಿಗೆ ಅರ್ಧ ರಾಜ್ಯವನ್ನು ಕೊಡುವೆನೆಂದು ಡಂಗುರ ಹೊಡೆಸಿ ದನು. ಆಗ ಈ ಕಟ್ಟಿಗೆಯ ಸೇವಕನು ಬಂದು "ಪಕ್ಕಡ" ಎನ್ನುವದರೊಳಗೆ ಎಲ್ಲ ನಂಟರ ಅಂಟಿನ ಸರಪಳಿಯ ಕೊಂಡಿ ಗಳೂ ಕಳಚಿದವು. ಹೀಗೆ ಒಂದೇ ಕಥೆಯು ಕಥೆಗಾರರ ಕಲ್ಪನೆ ಯಲ್ಲಿ ಹೇಗೆ ವಿಕಾಸ ಪಡೆದು ಬದಲಾವಣೆ ಹೊಂದುವದೆಂಬುದು ತಿಳಿಯುತ್ತದೆ.

ಇನ್ನು ತೀರ ವಿಶಿಷ್ಟವಾದ "ಕುಪ್ಪಣ್ಣ ಭಟ್ಟನ ಕಥೆ" "ತಿಮ್ಮಪ್ಪ ನಾಯ್ಕನ ಕಥೆ" "ಎಡಗೈ ಸಾವಿರ, ಬಲಗೈ ಸಾವಿರ" "ಸಣ್ಣಕ್ಕಿಯ ಕಥೆ". "ಭಟ್ಟಮಾಣಿಯ ಕಥೆ", "ಮೊಮ್ಮಗನ ಅದೃಷ್ಟದ ಕಥೆ", "ಸಿದ್ದೋವರೆ ಮಲ್ಲಿಗೆ ಹೆಣ್ಣಿನ ಕಥೆ". "ಭಾನು ಮತಿಯ ಕಥೆ". "ರಾವಣ ಸನ್ಯಾಸಿಯ ಕಥೆ" ಮುಂತಾದವು ಒಂದಕ್ಕಿಂತ ಇನ್ನೊಂದು ಹೆಚ್ಚು ಸ್ವಾರಸ್ಯವಾಗಿ ದಿವಂಗತ ಉಪ್ಪಿನ ಪಟ್ಟಣ ರಾಮಭಟ್ಟರು ಶ್ರೇಷ್ಠ ಜಾನಪದ ಕಥೆಗಾರ ರಾಗಿದ್ದರೆಂಬುದಕ್ಕೆ ಸಾಕ್ಷಿ ನುಡಿಯುತ್ತವೆ. ಹಲವಾರು ಕಥೆ ಗಳು ನಮ್ಮ ಮುತ್ತಜ್ಜಿಯವರ ಮುಪ್ಪಿನ ಮರವೆಯಲ್ಲಿ ಮರೆ ಯಾಗಿವೆ. ಈ ಹದಿನೈದಿಪ್ಪತ್ತು ಕಥೆಗಳೇ ಆದರೂ ಸಾವಿರಾರು ಜನರಿಗೆ ಹೇಳಿ ರೂಢಿಯಲ್ಲಿದ್ದುದರಿಂದ ಇನ್ನೂ ಉಳಿದು ಕೊಂಡಿವೆ. ಈ ಪರಂಪರೆಯ ಕಥೆಗಳ ಪ್ರಾರಂಭವು ಹಿಂದೆ ತಿಳಿದಂತೆ "ಅರಸು, ಪ್ರಧಾನಿ, ಕೋಲಕಾರ- ಪೇಳವಾರ. ತಳವಾರ....." ಇತ್ಯಾದಿಯಾಗಿಯೇ ಇರುತ್ತದೆ. ರಾಜನು ಸೂರ್ಯಶೇಖರ, ಮಂತ್ರಿ ಚಂದ್ರಶೇಖರ: ಎಷ್ಟೋ ವ್ಯಕ್ತಿಗಳಿಗೆ ಊರುಗಳಿಗೆ ಹೆಸರನ್ನೇ ಕೊಟ್ಟಿಲ್ಲ.

## ಜಾಣರ ಕೈವಾಡ

ಒಂದೂರಲ್ಲಿ ಒಬ್ಬ ಭಟ್ಟನಿದ್ದನು. ಅವನಿಗೆ ಮೂವರು ಹೆಣ್ಣುಮಕ್ಕಳು. ಒಂದು ದಿನ ರಾತ್ರಿ ಆ ಮೂವರೂ ಹೆಣ್ಣು ಮಕ್ಕಳು ಮೂತ್ರ ವಿಸರ್ಜನೆ ಮಾಡಲು ಹೊರಗೆ ಬಂದಿದ್ದರು.

ರಾಜನು ರಾತ್ರಿ ವಿಹಾರಕ್ಕಾಗಿ ಹೊರಟಿದ್ದನು. ಆಗ ಆತನ ಪರಿವಾರದವರು ಮದ್ದಳೆಯನ್ನು ನುಡಿಸುತ್ತಿದ್ದರು. ರಾಜನು ಮಾರ್ಗದಲ್ಲಿ ಹತ್ತಿರ ಬರುತ್ತಿದ್ದನು. ಮೂವರಲ್ಲಿ ಎರಡನೆಯವಳು "ಅಕ್ಕ, ಕೇಳೆ ತೊಗಲ ಮೋಜ" ಎಂದು ಹೇಳಿದಳು.

ಕಿರಿ ಹುಡುಗಿಯು "ಅದಕ್ಕಿಲ್ಲ ಹೊತ್ತು ವೇಳೆ ಉಂಟು" ಎಂದು ದನಿಗೂಡಿಸಿದಳು.

ಹಿರಿಯುವಳು "ಅದೆಲ್ಲ ಜಾಣರ ಕೈವಾಡ" ಎಂದು ಹೇಳಿದಳು.

ರಾಜನು ಈ ಅಕ್ಕತಂಗಿಯರ ಮಾತುಗಳನ್ನು ಕೇಳಿದನು. ಅವನಿಗೆ ಈ ಮಾತುಗಳ ಅರ್ಥವೇನೆಂಬುದು ತಿಳಿಯಲಿಲ್ಲ. ಅರಮನೆಗೆ ಮರಳಿದ ಅವನು ಮರುದಿನ ಓಲಗದಲ್ಲಿ ಮುನ್ನಾದಿನ ಈ ಹುಡುಗಿಯರು ಹೇಳಿದ ಮಾತುಗಳನ್ನು ಒಂದೊಂದಾಗಿ ಸಭೆಯಲ್ಲಿ ಹೇಳಿ ಇವುಗಳ ಅರ್ಥಗಳನ್ನು ಬಲ್ಲವರು ಹೇಳಿರೆಂದು ಸಭಿಕರಿಗೆ ಕೇಳಿದನು. ಯಾರೂ ಅರ್ಥ ಹೇಳಲು ಸಮರ್ಥರಾಗಲಿಲ್ಲ. ಆಗ ರಾಜನು ಹುಡುಗಿಯರ ತಂದೆಗೆ ಕರೆಕಳಿಸಿದನು. ಆ ಭಟ್ಟನು ಬಂದ ಮೇಲೆ ರಾಜನು "ರಾತ್ರಿ ಹೊತ್ತಿನಲ್ಲಿ ನಿನ್ನ ಹೆಣ್ಣುಮಕ್ಕಳು ಹೊರಗೆ ಬಂದಿದ್ದಾಗ ಹೀಗೆ ಹೇಳಿದುದರ ಅರ್ಥವೇನು?" ಎಂದು ಕೇಳಿದನು.

ಭಟ್ಟನು "ನನಗೆ ಗೊತ್ತಿಲ್ಲ" ಎಂದು ಅಂಜುತ್ತಲೆ ಹೇಳಿದನು. "ಹಾಗಾದರೆ ನಿನ್ನ ಮೂವರು ಹುಡುಗಿಯರನ್ನು ಕರೆದುಕೊಂಡು ಬಾ" ಎಂದು ಅವನನ್ನು ಅರಸನು ಕಳಿಸಿದನು.

ಭಟ್ಟನು ಮನೆಗೆ ಬಂದವನು ಹುಡುಗಿಯರಿಗೆ "ಅಧಿಕ ಪ್ರಸಂಗಿಗಳು ! ತಮ್ಮಷ್ಟಕ್ಕೆ ಸುಮ್ಮನಿರಲಾರದೆ ಇಲ್ಲದ ಉಪದ್ವ್ಯಾಪ ತಂದು ಹಾಕಿದರು"ಎಂದು ಹೇಳಿ ಅವರಿಗೆ ಬಯ್ದನು. ರಾಜನ ಅಪ್ಪಣೆಯಂತೆ ಹುಡುಗಿಯರನ್ನು ಅರಮನೆಗೆ ಕರೆದುಕೊಂಡು ಹೋದನು.

ಹುಡುಗಿಯರು ದಿಟ್ಟತನದಿಂದ ಸಭೆಯಲ್ಲಿ ರಾಜನ ಮುಂದೆ ನಿಂತರು. ಅರಸನು ಅವರು ಹೇಳಿದ್ದ ಮಾತುಗಳ ಅರ್ಥವನ್ನು ಕೇಳಿದನು.

ರಾಜನ ಮಾತಿಗೆ ಯಾರೂ ಉತ್ತರ ಕೊಡಲಿಲ್ಲ. ಎರಡನೆಯವಳು "ಅಕ್ಕ, ಇವೆಲ್ಲ ಆವೇ ಸರಿ" ಅಂದಳು. ಕಿರಿಯ ಮೂರನೆಯವಳು "ಅವಾದರೆ ಕಾವೇನಿಲ್ಲಲ !" ಎಂದು ದನಿಗೂಡಿಸಿದಳು. ಹಿರಿಯವಳು "ಕೆಲವಕ್ಕೆ ಇರ್ತದೆ; ಕೆಲವಕ್ಕೆ ಇರುವದಿಲ್ಲ" ಎಂದು ಹೇಳಿ ನಕ್ಕಳು.

ಆಗ ರಾಜನಿಗೆ ಮತ್ತೂ ಆಶ್ಚರ್ಯವಾಯಿತು. ಮೊದಲಿನ ಸಮಸ್ಯೆಗಿಂತಲೂ ಇದು ಕಠಿಣವೆಂದು ಅವನಿಗೂ ಸಭಾಸದರಿಗೂ ಅನಿಸಿತು. ಭಟ್ಟನು ಸಿಟ್ಟಿನಿಂದ ಮಕ್ಕಳನ್ನು ಕಣ್ಣುಬಿಟ್ಟು ನೋಡುತ್ತ "ಏನು ಪ್ರಮಾದ ಕಾದಿದೆಯೋ?" ಎಂದು ಚಡಪಡಿಸುತ್ತಿದ್ದನು.

ರಾಜನು ''ಇದೇನು ಗೂಢವಾದ ಮಾತುಗಳನ್ನೇ ಆಡುವ ಅಭ್ಯಾಸ ನಿಮಗೆ ಇದ್ದಹಾಗಿದೆ. ಒಗಟನ್ನು ಬಿಡಿಸಿ ಹೇಳಿ'' ಎಂದು ಹೇಳಿದನು.

ಆಗ ಹಿರಿಯುವಳು ದಿಟ್ಟತನದಿಂದ ಕೇಳಿದಳು. ‥ನಾವು ಇವರ ಅರ್ಥ ಹೇಳಿದರೆ ರಾಜರು ನಮ್ಮನ್ನು ಮದುವೆಯಾಗು ವಿರೋ? ಅಂದರೆ ಹೇಳುತ್ತೇವೆ" ಎಂದಳು. ಆಗ ರಾಜನು ನಕ್ಕು ‥ಬಲು ಜಾಣ ಹುಡುಗಿಯರು ನೀವು. ಆದರೆ ನಾನು ಮೂವ ರನ್ನೂ ಮದುವೆಯಾಗುವದಿಲ್ಲ. ನಾನು ನಿನ್ನನ್ನು ಮದುವೆ ಯಾಗುತ್ತೇನೆ, ನಮ್ಮ ಪ್ರಧಾನಿಯು ಎರಡನೆಯುವಳನ್ನು ಮದುವೆಯಾಗಲಿ, ಕಿರಿಯ ಹುಡಿಗೆಯನ್ನು ನಮ್ಮ ಅಡಿಗೆ ಭಟ್ಟ ಮದುವೆಯಾಗುತ್ತಾನೆ. ಒಪ್ಪಿದಿರೋ ? '' ಎಂದು ಕೇಳಿದನು.

ಹುಡುಗಿಯರು ‥ಹೂ" ಎಂದು ತಲೆಯಾಡಿಸಿದರು. ಕಿರಿಯ ಹುಡುಗಿ ಸ್ವಲ್ಪ ನಾಚಿದಳು. ಅವರಿಗೂ ಸಭಾಸದರಿಗೂ ರಾಜನಿಗೂ ಭಟ್ಟನಿಗೂ ಕೂಡ ನಗು ಬಂದುಹೋಯಿತು.

ಆಗ ಹಿರಿಯುಳ ಕಣ್ಸನ್ನೆಯಂತೆ ಎರಡನೆಯುವಳು ‥ತೊಗಲ ಮೋಜು ಎಂದು ಅಂದುದೇಕೆಂದರೆ ಮದ್ದಳೆಯ ಶಬ್ದ ಕೇಳಿ ಮದ್ದಳೆಗೆ ಕಟ್ಟಿದ ತೊಗಲಿನ ಶಬ್ದ ಎಷ್ಟು ಪಸಂದಾಗಿದೆ ಎಂದು ಹೇಳಿದೆ ಅಷ್ಟೇ" ಎಂದು ಹೇಳಿದಳು.

ಕಿರಿಯ ಹುಡುಗಿ "ಹೊತ್ತು ವೇಳೆ ಉಂಟು" ಎಂದುದೇ ಕೆಂದರೆ ಇಂತಿಂತಿಷ್ಟು ಹೊತ್ತಿಗೆ ಇಂಥ ಕಾಲಗಳಲ್ಲಿ ಮದ್ದಳೆ ಬಡಿಯಬೇಕು ಎಂದು ನಿಶ್ಚಿತವಾದ ಕ್ರಮವಿದೆ ಎಂದು ಅರ್ಥ" ಎಂದಳು.

ಹಿರಿಯ ಹುಡುಗಿಯು "ಅದೆಲ್ಲ ಜಾಣರ ಕೈವಾಡ ಅಂದರೆ ಮದ್ದಳೆ ಬಡಿವಲ್ಲೂ ಹಸ್ತಕೌಶಲ ಬೇಕಾಗುತ್ತದೆ. ಅಂಥ ಬುದ್ಧಿವಂತರು ಬಡಿದರೆ ಮಾತ್ರ ಕೇಳಲು ಪಸಂದಾಗಿರುತ್ತದೆ ಎಂದು ನನ್ನ ಮಾತಿನ ಅರ್ಥ" ಎಂದು ವಿವರಿಸಿದಳು.

ರಾಜನು 'ಇಷ್ಟು ಸುಲಭ ಮಾತುಗಳ ಅರ್ಥ ತಿಳಿಯಲಿಲ್ಲವಲ್ಲ' ಎಂದು ನಾಚಿಕೊಂಡನು. "ನಂತರದ ಮಾತುಗಳ ಅರ್ಥವೇನು ?" ಎಂದು ಕೇಳಿದನು.

ಅದಕ್ಕೆ ಹಿರಿಯವಳು "ಮಾತಿನ ಅರ್ಥ ಕೇಳಿಕೊಂಡು ಸಿಟ್ಟಾಗಿ ರಾಜರು ನಮ್ಮನ್ನು ದಂಡಿಸುವದಿಲ್ಲವೆಂದು ವಚನ ಕೊಡಬೇಕು" ಎಂದು ಕೇಳಿಕೊಂಡಳು. ರಾಜನು ಅದಕ್ಕೆ ಒಪ್ಪಿ "ಸರಿ ಇನ್ನು ವಿವರಣೆಯಾಗಲಿ" ಎಂದನು.

ಹಿರಿಯ ಹುಡುಗಿಯೇ ವಿವರಿಸಿದಳು. "ಇವೆಲ್ಲ ಅವೇ ಸರಿ ಎಂದರೆ ಇವರಿಗೆ ಇಷ್ಟು ಸುಲಭವಾದ ಮಾತಿನ ಅರ್ಥ ತಿಳಿಯಲಿಲ್ಲ. ಇವೆಲ್ಲ ಕುರಿಗಳೇ ಎಂದುದು". "ನನ್ನ ಕಿರಿ ತಂಗಿ ಕೋಡೇ ಇಲ್ಲಲ ಎಂದು ಹೇಳುವ ಅರ್ಥದಲ್ಲಿ ಕಾವೇನಿಲ್ಲಲ ಎಂದುದು."

ಅದಕ್ಕೆ ನಾನು "ಕೆಲವಕ್ಕೆ ಇರುತ್ತದೆ; ಕೆಲವಕ್ಕೆ ಇದುವದಿಲ್ಲ ಅಂದದ್ದೇಕೆಂದರೆ ಕುರಿ ಮರಿಗಳಿಗೆ ಕೋಡಿರುವದಿಲ್ಲ. ದೊಡ್ಡ ಕುರಿಗಳಿಗೆ ಮಾತ್ರ ಕೋಡು ಇರುತ್ತವೆ ಎಂದು ಹೇಳಿದೆನು" ಎಂದು ವಿವರಿಸಿದಳು.

ರಾಜನೂ ಸಭಾಸದರೂ ಈ ಹುಡುಗಿಯರ ಧೈರ್ಯಕ್ಕೂ ಜಾಣತನಕ್ಕೂ ವಿಸ್ಮಿತರಾದರು. ತಮ್ಮನ್ನು ಈ ಚಿಕ್ಕ ಹುಡುಗಿ

ಘುರು ಕುರಿಮರಿಗಳಿಗೆ ಹೋಲಿಸಿದುದರಿಂದ ಅವರಿಗೆ ನಗು ಬಾರದಿರಲಿಲ್ಲ.

ರಾಜನು ಮಾತು ಕೊಟ್ಟಿದ್ದಂತೆ ಹಿರಿಯ ಹುಡುಗಿಯನ್ನು ಮದುವೆಯಾದನು. ಪ್ರಧಾನಿಯು ಎರಡನೆಯವಳನ್ನೂ ರಾಜನ ಅಡಿಗೆ ಭಟ್ಟನು ಕಿರಿಯ ಹುಡುಗಿಯನ್ನೂ ಮದುವೆಯಾದರು. ಎಲ್ಲರೂ ಸುಖ ಸಂತೋಷದಿಂದ ಉಳಿದರು.

ಈ ಚಿಕ್ಕ ಕತೆಯಲ್ಲಿ ಎರಡು ಸಮಸ್ಯೆಗಳನ್ನು ಗೂಢಾತ್ ಗೂಢತರವಾಗುವಂತೆ ಕುತೂಹಲ ಹೆಚ್ಚುವಂತೆ ಹೇಳಿಸಿದು ಮೆಚ್ಚುವಂತಿದೆ. ಹುಡುಗಿಯರ ಜಾಣತನ, ಅದರಲ್ಲೂ ಹಿರಿಯಳ ಧೈರ್ಯ, ಜಾಣತನ ಹೊಗಳತಕ್ಕುದು. ಅಲ್ಲದೆ ಮದುವೆಯಾಗುವಲ್ಲಿಯೂ ಕಿರಿಯಳಿಗೆ ಅಡಿಗೆ ಭಟ್ಟನನ್ನು ಮದುವೆ ಮಾಡುವಲ್ಲಿ ಕತೆಗಾರನ Anti-climax (ಶಿಖರದಿಂದ ಇಳಿತ) ಪದ್ಧತಿಯಿಂದ ಕಥೆಯ ಮುಕ್ತಾಯದ ಸ್ವಾರಸ್ಯವು ಹೆಚ್ಚಿದೆ.

ಮತ್ತೊಂದು ಕಥೆಯಲ್ಲಿ ಪಾರ್ವತಿ-ಪರಮೇಶ್ವರರು ಬರುತ್ತಾರೆ. ಪಾರ್ವತಿ-ಪರಮೇಶ್ವರರು ಆಕಾಶದಲ್ಲಿ ಸಂಚಾರಮಾಡುತ್ತಿರುವಾಗ ರಾಜನ ಮಗನ ಮದುವೆಯ ದಿಬ್ಬಣವನ್ನು ನೋಡಿ ಪಾರ್ವತಿಯು "ಮದುವೆ ನೋಡಿಕೊಂಡು ಹೋಗೋಣ" ಎಂದು ಪರಮೇಶ್ವರನ ಹತ್ತಿರ ಹೇಳಿದಳು. ಪರಮೇಶ್ವರನು "ಶ್ರೀಮಂತರ ಮನೆಯಲ್ಲಿ ಯಾರೂ ಒಳ್ಳೆಯ ಮಾತನ್ನು ಆಡದೆ, ಸತ್ಕರಿಸದೆ, ತಿರಸ್ಕರಿಸುತ್ತಾರೆ; ಹೋಗುವದು ಬೇಡ" ಅಂದನು. ಪಾರ್ವತಿಯು ಹೋಗಲೇಬೇಕೆಂದು ಹಟಹಿಡಿದಳು. ಅವರಿಬ್ಬರೂ ಭಿಕ್ಷುಕ ವೇಷದಿಂದ ಹೋಗುತ್ತಾರೆ. ಆದರೆ ಅಲ್ಲಿ ದಿಬ್ಬಣದವರನ್ನು ಸತ್ಕರಿಸುವ ಜನರು ಇವರಿಗೆ ತೃಷೆಗೆ ಕೇಳಲಿಲ್ಲ; ಊಟಕ್ಕೆ

ನೀಡಲಿಲ್ಲ. ಬದಲಿಗೆ ಒನಿಕೆ ತಕ್ಕೊಂಡು ಬಡಿಯಲು ಬಂದರು. ಅಲ್ಲಿಂದ ಅವರು ಹೊರಟು ಒಬ್ಬನೇ ಮಗನನ್ನು ಕಳೆದು ಕೊಂಡಿದ್ದ ಅಜ್ಜಿಯ ಗುಡಿಸಲಿಗೆ ಬರುತ್ತಾರೆ. ಅಜ್ಜಿಯು ಪ್ರೀತಿ ಯಿಂದ ಅವರನ್ನು ಸ್ವಾಗತಿಸಿ ಅಡಿಗೆ ಮಾಡಿಕೊಂಡು ಊಟ ಮಾಡಿ ನನಗೂ ಒಡಿಸಿರೆಂದು ವಾತ್ಸಲ್ಯದಿಂದ ಕರೆಯುತ್ತಾಳೆ. ಸುಪ್ರೀತನಾದ ಪರಮೇಶ್ವರನು ಅವಳ ಸತ್ತಿದ್ದ ಮಗನನ್ನು ಬದುಕಿಸಿ ಅವಳ ಮನೆಯನ್ನು ಭವ್ಯಭವನವನ್ನಾಗಿ ಪರಿವರ್ತಿಸು ತ್ತಾನೆ. ಸಂಪತ್ತನ್ನೂ ನೀಡುತ್ತಾನೆ.

ಅಜ್ಜಿ ತನ್ನ ಮಗನಿಗೆ ಹೆಣ್ಣು ಕೇಳಲು ಅಣ್ಣಂದಿರ ಮನೆಗೆ ಹೋಗುತ್ತಾಳೆ. "ಸತ್ತ ಮಗನ ಹೆಣ್ಣು ಕೇಳಲು ಬಂದಿದ್ದಾಳೆ ! ಬಡ ತಂಗಿಗೆ ಹುಚ್ಚು ಹಿಡಿದಿದೆ'' ಎಂದು ತಿಳಿದು ಹಿರಿಯ ಅಣ್ಣನು "ಕರಿ ಬುಧವಾರ ದಿಬ್ಬಣ ತೆಗೆದುಕೊಂಡು ಬಾ" ಎಂದು ಹೇಳಿಬಿಡುತ್ತಾನೆ. ತಂಗಿಯು ನಂಬಿಕೊಂಡು ಕೃಷ್ಣಪಕ್ಷದ ಒಂದು ಬುಧವಾರದಂದು ವೈಭವದಿಂದ ದಿಬ್ಬಣ ಹೊರಡಿಸಿಕೊಂಡು ಬರುತ್ತಾಳೆ. ಅಣ್ಣನ ಮನೆಯಲ್ಲಿ ಮದು ವೆಯ ಯಾವ ಸಿದ್ಧತೆಯೂ ಇರುವದಿಲ್ಲ. ತಂಗಿಯ ಮನೆಯ ಮದುಮಗನನ್ನು ನೋಡಿ, ಮದುವೆಯ ದಿಬ್ಬಣದ ವೈಭವ ವನ್ನು ನೋಡಿದ ಮೇಲೆ ಅಣ್ಣಂದಿರು ಹೆಣ್ಣುಕೊಡಲು 'ನಾ ಮುಂದೆ ತಾ ಮುಂದೆ' ಎಂದು ಬಂದು "ಇನ್ನೊಂದು ದಿನ ದಿಬ್ಬಣ ತೆಗೆದುಕೊಂಡು ಬಾ. ಲಗ್ನದ ಸಿದ್ಧತೆ ಮಾಡಿಕೊಂಡಿರು ವೆವು" ಎನ್ನುತ್ತಾರೆ, ಆದರೆ ಅಜ್ಜಿಯು ಆಗ ಅವರ ಕೊಡುಗೆ ಯನ್ನು ನಿರಾಕರಿಸಿ ಕಿರಿ ತಮ್ಮನ ಮಗಳನ್ನು ತಂದುಕೊಳ್ಳಲು ನಿರ್ಧರಿಸುತ್ತಾಳೆ.

ಈ ಕಥೆಯಾದರೂ ಸ್ವಾರಸ್ಯವಾಗಿದೆ. ತಂಗಿಯು ಹುಚ್ಚಿಯೆಂದು ಹಿರಿ ಅಣ್ಣನು "ಮಂಗ ಅಜ್ಜೀ, ತಲೆಗೆ ಒನಿಕೆ ಸುತ್ತ ಬೇಕೋ ?" ಎಂದು ಕೇಳುತ್ತಾನೆ. ಅವನ ಸುಳ್ಳುಗಾರಿಕೆಯ ಹಾಸ್ಯ "ಕರಿ ಬುಧವಾರ" ಎಂಬಲ್ಲಿ ವ್ಯಕ್ತವಾಗಿದೆ. ಬಡವರನ್ನು ಕುರಿತ ಸಿರಿವಂತರ ತಿರಸ್ಕಾರವನ್ನೂ, ದೇವರು ಒಳ್ಳೆಯವರ ಹಾಗು ಬಡವರ ಕೈವಾರಿ ಎಂಬುದನ್ನೂ ಈ ಕಥೆಯು ಹೃದಯಂಗಮವಾಗಿ ನಿರೂಪಿಸುತ್ತದೆ.

ಬಹುತರವಾಗಿ ಎಲ್ಲ ಕಥೆಗಳೂ ನೀತಿ ನಿರೂಪಣೆಯನ್ನು ಮಾಡುತ್ತವೆ. ಆದರೆ ಸ್ವಾಭಾವಿಕವಾಗಿ, ಕಲಾತ್ಮಕವಾಗಿ, ಗಿಡದಲ್ಲಿ ಹೂ ಅರಳಿದಂತೆ ಸುಂದರವಾಗಿ ನೀತಿಬೋಧೆ ಕಂಡುಬರುತ್ತದೆ. "ರಾವಣ ಸನ್ಯಾಸಿಯ ಕಥೆ"ಯಲ್ಲಿ ಉದಾರನಾದ ರಾಜನಿಗೆ ಬಹಳ ಕಷ್ಟಬಂದರೂ ಅದೆಲ್ಲ ಪರಿಹಾರವಾಗಿ ಆತನು ಕಳೆದುಕೊಂಡಿದ್ದ ಹೆಂಡತಿ. ಮಕ್ಕಳು ಅವನಿಗೆ ದೊರೆಯುತ್ತಾರೆ. "ಕುಪ್ಪಣ್ಣಭಟ್ಟನ ಕಥೆ"ಯಲ್ಲಿ ಪತಿವ್ರತೆಯಾದ ಸ್ತ್ರೀಯ ಗಟ್ಟಿಮನಸ್ಸು ಹಾಗು ಸಾಹಸದ ವರ್ಣನೆಯಿದೆ. "ಸಣ್ಣಕ್ಕಿಯ ಕಥೆ"ಯಲ್ಲಿ "ಪರರ ಕೇಡು, ತನ್ನ ಕೇಡು" ಎಂಬ ನೀತಿಯಿದೆ. ದುಷ್ಟ ಅಣ್ಣಂದಿರು ತಮ್ಮನನ್ನು ಕೊಲ್ಲಲು ಹೋಗಿ ವಿಚಿತ್ರ ವಿಧಿಯಿಂದ ತಾವೇ ಸಾವನ್ನಪ್ಪುತ್ತಾರೆ. "ಸಿದ್ದೂವರೆ ಮಲ್ಲಿಗೆ" ಹೆಣ್ಣಿನ ಕಥೆಯಲ್ಲಿ "ಸಾಹಸೇ ಶ್ರೀಃ ಪ್ರತಿವಸತಿ" ಎಂಬಂತೆ ಬುದ್ಧಿಬಲ ಹಾಗು ಸಾಹಸದ ಫಲಶ್ರುತಿಯಿದೆ. "ಎಡಗೈ ಸಾವಿರ ಬಲಗೈಸಾವಿರ'' ಕಥೆಯಲ್ಲಿ ಧೈರ್ಯವಂತರ ವಿಜಯುವಾಗುತ್ತದೆ. "ಮೊಮ್ಮಗನ ಅದೃಷ್ಟದ ಕಥೆ'' ಅದೃಷ್ಟದ ಬಲವನ್ನು ಹಾಸ್ಯರೂಪವಾಗಿ ಹೇಳುತ್ತದೆ.

“ಭಾನುಮತಿಯ ಕಥೆ”ಯಲ್ಲಿ ಮಾತ್ರ ಪ್ರಣಯ ಶೃಂಗಾರ ನಿರೂಪಣೆಯಿದೆ.

“ಎಡಗೈ ಸಾವಿರ, ಬಲಗೈ ಸಾವಿರ” ಎಂಬ ಕಥೆಯಲ್ಲಿ ರಾಜಕುಮಾರ, ಮಂತ್ರಿಕುಮಾರ, ಕೋಲುಕಾರನ ಮಗ, ತಳವಾರನ ಮಗ ನಾಲ್ವರೂ ಒಬ್ಬ ರಾಜನ ಹತ್ತಿರ ಕೆಲಸಕ್ಕೆ ನಿಲ್ಲುತ್ತಾರೆ. ರಾಜನ ಮಗನು ಸಾಯಲು ರಾತ್ರಿ ಅವನ ಹೆಣ ಕಾಯಲು ನಿಯುಕ್ತರಾಗುತ್ತಾರೆ. ಒಬ್ಬ ಸನ್ಯಾಸಿಯು ಮಂತ್ರದ ಬಲದಿಂದ ರಾಜಕುಮಾರಿಯನ್ನು ಕಾಳಿಕಾ ದೇವಿಗೆ ಬಲಿ ಕೊಡಲು ಮಂಚ ಸಹಿತವಾಗಿ ಹಾರಿಸುತ್ತಾನೆ. ಈ ಸೇವಕರು ಒಬ್ಬೊಬ್ಬರಾಗಿ ಶೋಧಕ್ಕೆ ಹೋಗುವುದು ತುಂಬ ಸ್ವಾರಸ್ಯವಾಗಿದೆ. ಕೋಲುಕಾರನ ಮಗನು ಹೋದಾಗ ದಾರಿಯಲ್ಲಿ ಹನ್ನೆರಡು ಜನ ರಾಕ್ಷಸರು, ಹನ್ನೊಂದು ಹೆಣಗಳನ್ನು ಇಟ್ಟುಕೊಂಡು ಕುಳಿತಿರುತ್ತಾರೆ. ಇವನನ್ನು ನೋಡಿ ರಾಕ್ಷಸರು ನಕ್ಕರು. ಇವನು ಮತ್ತೂ ದೊಡ್ಡದಾಗಿ ನಕ್ಕನು. “ಯಾಕೆ ನಗುತ್ತೀರಿ?” ಎಂದು ಕೇಳಲು ಅವರು “ನಮ್ಮ ಹತ್ತಿರ ಹನ್ನೊಂದು ಹೆಣ ಉಂಟು. ಹನ್ನೆರಡು ರಾಕ್ಷಸರಿಗೆ ಒಂದು ಹೆಣ ಕಡಿಮೆ ಬೀಳುತ್ತದೆ. ನೀನು ಅನಾಯಾಸವಾಗಿ ಸಿಕ್ಕೆ! ಎಂದು ಸಂತೋಷದಿಂದ ನಕ್ಕೆವು” ಎಂದರು. ಕೋಲುಕಾರನ ಮಗನು ಹೆದರದೆ “ನನಗೆ ಹನ್ನೆರಡು ಜನ ರಾಕ್ಷಸರು ಒಟ್ಟಾಗಿ ಸಿಕ್ಕದೆ ಹನ್ನೆರಡು ವರ್ಷವಾಗಿತ್ತು. ಇಂದು ನೀವು ಅನಾಯಾಸ ಒಟ್ಟಿಗೆ ಸಿಕ್ಕಿರಿ! ಎಂದು ನನಗೆ ಸಂತೋಷವಾಗಿ ನಕ್ಕೆನು ” ಎಂದು ಹೇಳಿ ಪಟಾರ್‌ಗತ್ತಿಯನ್ನು ಒರೆಯಿಂದ ಹಿರಿದು ಬೀಸುವುದರೊಳಗೆ ಹನ್ನೊಂದು ಜನ ರಾಕ್ಷಸರು ಹೆದರಿ ಓಡಿ ಹೋದರು. ಕುಂಟ

ನಾದ ಒಬ್ಬ ರಾಕ್ಷಸನು ಉಳಿದನು. ಅವನಿಗೆ "ನಿನಗೆ ನಾನು ಜೀವದಾನ ಮಾಡಿದ್ದೇನೆ. ನೀನು ಈ ಹನ್ನೊಂದು ಹೆಣಗಳನ್ನು ತಿನ್ನು" ಎಂದು ಹೇಳಿದನು. ಆಗ ರಾಕ್ಷಸನು ಹನ್ನೊಂದು ಹೆಣಗಳನ್ನು ತಿಂದು "ನನಗೆ ಇನ್ನು ಹನ್ನೆರಡು ವರ್ಷ ಆಹಾರ ಬೇಡ!" ಎಂದು ಹೇಳಿ ತನ್ನ ಜೀವವನ್ನುಳಿಸಿ ಆಹಾರವನ್ನು ಕೊಟ್ಟುದಕ್ಕೆ ಒಂದು ಮಾಂತ್ರಿಕ ಉಂಗುರವನ್ನು ಕೊಟ್ಟನು. ಈ ಕಥೆಯು ಬಹಳ ಸ್ವಾರಸ್ಯವಾಗಿ ಮುಂದೆ ಸಾಗುತ್ತದೆ. ಇಲ್ಲಿ ಒಂದು ಸನ್ನಿವೇಶವನ್ನು ಮಾತ್ರ ಕೊಟ್ಟಿದೆ.

ದೊಡ್ಡದಾದ "ಪಟ್ಟಣಶೆಟ್ಟಿಯ ಕಥೆ"ಯಲ್ಲಿ ಬಾವಿಯಲ್ಲಿ ಳಿದ ರಾಜಕುಮಾರನಿಗೆ ಬ್ರಹ್ಮರಾಕ್ಷಸನ ಮಗಳು ಭೆಟ್ಟಿಯಾಗುತ್ತಾಳೆ. ತಂದೆಯು ಬರುವುದರೊಳಗೆ ಅವಳು ರಾಜಕುಮಾರನನ್ನು ನೊಣದ ರೂಪಕ್ಕೆ ತಿರುಗಿಸಿದಳು. ಬ್ರಹ್ಮರಾಕ್ಷಸನಿಗೆ "ನರಮನುಷ್ಯರ ಪರಿಮಳ ಬರುತ್ತದೆ." ಮಗಳು "ಇಲ್ಲ, ನಿನಗೆ ಭ್ರಮೆ. ಯಾರಿಲ್ಲ ಇಲ್ಲಿ" ಎಂದಳು.

ಬ್ರಹ್ಮರಾಕ್ಷಸನಿಗೆ ರಾತ್ರಿಯಲ್ಲಿ ಏಳು ಕೊಪ್ಪರಿಗೆ ನೀರು ಕಾಯಿಸಿ ಮೀಯಿಸಬೇಕು. ಅವರ ಮೈ ಕೈ ನೋವು ಕಳೆಯಲು ಕೊಡತಿಗೆಯಿಂದ ಅವನ ಮೈಯನ್ನು ಜಜ್ಜಬೇಕು!

ಅವನನ್ನು ಮೀಯಿಸಿ "ಅಪ್ಪ, ಯಾರಾದರೂ ನಿನ್ನನ್ನು ಹೊಡೆದು ಕೊಂದರೆ ನನ್ನ ಗತಿಯೇನು?" ಎಂದು ಅವಳು ಕೇಳಿದಳು. ಅವನು "ನನ್ನ ಆತ್ಮ ನನ್ನ ಶರೀರದಲ್ಲಿಲ್ಲ. ಅದು ನನ್ನ ಹಿತ್ತಲ ಹಿಂದಿನ ಗೋಳೀಮರದಲ್ಲಿದೆ." ಎಂದನು.

ರಾಕ್ಷಸನು ಹೋದ ಮೇಲೆ ನೊಣವನ್ನು ಪುನಃ ರಾಜಕುಮಾರನನ್ನಾಗಿ ಅವಳು ಮಾಡಿದಳು. ರಾಜಕುಮಾರನು

ಗೋಳೀಮರದ ಟೊಂಗೆ ಕಡಿದಂತೆ ಬ್ರಹ್ಮರಾಕ್ಷಸನು ಕೈ ಕಾಲು ತುಂಡಾಗುತ್ತ ಕೂಗುತ್ತ ಮರಣ ಹೊಂದಿದನು.

"ಸಿದ್ದೂವರೆ ಮಲ್ಲಿಗೆ ಹೆಣ್ಣಿನ ಕಥೆ"ಯಲ್ಲಿ ಕಿರಿ ರಾಜ ಕುಮಾರನು ಏಳು ಸಮುದ್ರದಾಚೆಯಿರುವ ರಾಜಕುಮಾರಿ ಯನ್ನು ತಂದರೆ ಮಹಾಶೇಷನಿಗೆ (ಏಳು ಹೆಡೆಯುಳ್ಳದ್ದು) ಕಣ್ಣು ಕಾಣಿಸುತ್ತವೆ. ಅವನು ಮಂತ್ರದ ಕಲ್ಲಿನ ಸಹಾಯ ದಿಂದ ಸಮುದ್ರವು ಭಾಗವಾಗಲು ಹೋಗಿ ದ್ವೀಪ ಸೇರು ತ್ತಾನೆ. ಅಲ್ಲಿ ಒಬ್ಬ ಒಡ್ಡಣ್ಣ ಭೆಟ್ಟಿಯಾದ. ಅವನಿಗೆ "ಕೆರೆ ಕಾದರೆ ಒಂದು ವರ್ಷಕ್ಕೆ ಒಂದು ಕೊಡ ನೀರು ಸಂಬಳ!" ಅವನನ್ನು ಕರಕೊಂಡು ಮುಂದೆ ಹೋದ. ಹೊಲ ಕಾವ ತಿಪ್ಪಣ್ಣ ಕಂಡ. ಅವನಿಗೆ ಒಂದು ವರ್ಷಕ್ಕೆ ಒಂದು ಊಟ! ಮುಂದೆ ರಾಜಕುಮಾರಿಯು ಮದುವೆಯಾಗಲು ಅಸಾಧ್ಯ ಕೆಲಸ ಮಾಡಬೇಕು. ಆಗ ಒಡ್ಡಣ್ಣ ಒಂದೇ ತಾಸಿಗೆ ಏಳು ಕೊಪ್ಪ ರಿಗೆ ಕುದಿವ ನೀರನ್ನು ಮಿಂದನು! ಮತ್ತೊಮ್ಮೆ ತಿಪ್ಪಣ್ಣನು ಅರವತ್ತು ಖಂಡುಗ ಅಕ್ಕಿಯ ಅನ್ನವನ್ನು ಒಬ್ಬನೇ ಉಂಡನು. ಅದು ಸಾಲದೆ ಒಂದು ಒರಳು ಕಲ್ಲನ್ನು ನುಂಗಿ ಬಿಟ್ಟನು. ಬಾಗಿಲು ತೆಗೆದ ಮೇಲೆ ರಾಜಕುಮಾರನ ಹತ್ತಿರ ರಾಣಿಯು ಅಡಿಗೆಯವನು "ಅರವತ್ತು ಖಂಡುಗ ಅನ್ನ ತಿಂದದ್ದಲ್ಲದೆ ಒರಳು ಕಲ್ಲನ್ನು ಏನು ಮಾಡಿದೆ?" ಎಂದು ಕೇಳಿದನು. ಆಗ ತಿಪ್ಪಣ್ಣನು ನುಂಗಿದವನಾದರೂ ಕಠಿಣ ಕೆಲಸ ತಾನೇ ಮಾಡಿ ದೆನೆಂದು ತೋರಿಸಬೇಕಾದುದರಿಂದ ರಾಜಕುಮಾರನು "ಕಚ್ಚಿ ಕೊಳ್ಳಲು ಉಪ್ಪಿನಕಾಯಿಯ ಲೆಕ್ಕದಿಂದ ಒರಳುಕಲ್ಲನ್ನು ನುಂಗಿ ಬಿಟ್ಟೆನು!" ಎಂದು ಬುರುಡೆ ಹಾರಿಸಿದನು.

“ಸರ್ಪರಾಜನ ಕಥೆ”ಯಲ್ಲಿ ರಾಣಿಯು ಸರ್ಪನಿಗೆ ಜನ್ಮ ಕೊಡುತ್ತಾಳೆ.

“ಸುಟ್ಟವಿನ ಕಥೆ” ಎಂಬುದರಲ್ಲಿ ಬ್ರಹ್ಮರಾಕ್ಷಸನು ಒಬ್ಬ ಬಡವನ ಮಗಳನ್ನು ಹೊತ್ತುಕೊಂಡು ಹೋಗಿರುತ್ತಾನೆ.

ಮಾಳಿಗೆಯ ಮೇಲೆ ನಿಂತು ಬಡವನ ಮಗಳು, “ಸೂರ್ಯ ದೇವರೆ, ಸೂರ್ಯ ದೇವರೆ ನನಗೊಂದು ನೂಲುಂಡೆ!” ಎಂದು ಪ್ರಾರ್ಥಿಸಿದಳು. ಆಗ ಸೂರ್ಯ ದೇವನು ಆಕಾಶದಿಂದ ನೂಲು ಇಳಿಸಿದನು. ಆ ನೂಲೇಣಿಯನ್ನು ಹತ್ತಿ ಸೂರ್ಯಲೋಕಕ್ಕೆ ಹೋದಳು. ಬ್ರಹ್ಮರಾಕ್ಷಸನೂ ಹಾಗೆಯೇ ಪ್ರಾರ್ಥಿಸಿದನು. ಆಗ ಸೂರ್ಯ ದೇವನು ಆಕಾಶದಿಂದ ಹುಸಿ–ನೂಲುಂಡೆಯನ್ನು ಇಳಿಸಿದನು. ಬ್ರಹ್ಮರಾಕ್ಷಸನು ಆ ಹರಕು ನೂಲನ್ನೇರಿ ಹೋಗುವಾಗ ನೂಲು ಹುಸಿದು ಕೆಳಗೆ ಬಿದ್ದು ಸತ್ತು ಹೋದನು !

ಹೆಡ್ಡರ ಕಥೆಗಳೂ ತುಂಬ ಸ್ವಾರಸ್ಯವಾಗಿವೆ. “ಇಡಿ ತೆಂಗಿನಕಾಯಿ ಕಥೆ”ಯಲ್ಲಿ ಒಬ್ಬನು ನೆಂಟರ ಮನೆಯಲ್ಲಿ ಪಾಯಸವನ್ನು ಉಣ್ಣುತ್ತಾನೆ. ಬಹಳ ರುಚಿಯಾಗಿರುತ್ತದೆ. ಹೇಗೆ ಮಾಡಿದಿರೆಂದು ಕೇಳಿದರೆ ನೆಂಟನ ಹೆಂಡತಿ “ಇಡಿ ತೆಂಗಿನಕಾಯಿ ಹಾಕಿ ಮಾಡಿದೆ” ಎಂದಳು. ಆತ ಮನೆಗೆ ಬಂದು “ಇಡಿ ತೆಂಗಿನಕಾಯಿ ಹಾಕಿ ಪಾಯಸ ಮಾಡು; ರುಚಿಯಾಗುತ್ತದೆ” ಎಂದು ಹೆಂಡತಿಗೆ ಹೇಳಿದನು.

ಆಗ ಅವನ ಹೆಂಡತಿಯು ಎಸರಿಟ್ಟು, ಅಕ್ಕಿ ಹಾಕಿ ಜತೆಗೆ ಸಿಪ್ಪೆ ಸುಲಿಯದ ಇಡಿ ತೆಂಗಿನಕಾಯಿ ಹಾಕಿ ಪಾತ್ರೆಯನ್ನು ಒಲೆಯ ಮೇಲಿಟ್ಟಳು. ತೆಂಗಿನಕಾಯಿಯ ಸಿಪ್ಪೆಯು ಒಗರೂ

ಸೇರಿ ಆದ ಅಡಿಗೆಯು ಊಟಮಾಡುವಾಗ "ಬಾಯಿಗೆ ಹಾಕಲೊ ನಾಯಿಗೆ ಹಾಕಲೊ ! " ಎಂಬಂತೆ ಆಯಿತು.

"ಮೊಮ್ಮಗನ ಅದೃಷ್ಟದ ಕಥೆ"ಯಲ್ಲಿ ಒಬ್ಬ ಮುದುಕಿಯ ಹತ್ತಿರ ಅಡಿಗೆ ಮಾಡಲು ಅಕ್ಕಿ ಕೊಡುತ್ತಾನೆ ಮೊಮ್ಮಗ. ಅವಳು ಸ್ವಲ್ಪ ಅಕ್ಕಿ ತೆಗೆದಿಟ್ಟುಕೊಳ್ಳುತ್ತಾಳೆ. "ಗಡಿಗೆಯು ನಿನ್ನ ಕಳ್ಳತನವನ್ನು ಹೇಳುತ್ತದೆ" ಎಂದನು ಅವನು. ನೂರು ರೂಪಾಯಿ ಕೊಟ್ಟು ಮಾತನಾಡುವ ಆ ಪಾತ್ರೆಯನ್ನು ಅವಳು ತೆಗೆದುಕೊಂಡಳು ! ಅದು ಮಾತಾಡದಿದ್ದರೆ ಸೌದೆಚಕ್ಕೆಯಲ್ಲಿ ಹೊಡೆದು ಮಾತನಾಡಿಸಬೇಕೆಂದು ಅವನ ಸಲಹೆ ! ಅವಳು ಹಾಗೇ ಮಾಡಿ ಗಡಿಗೆ ಒಡೆದುಕೊಂಡಳು.

ಮುಂದೆ ಹೋದ ಮೊಮ್ಮಗ. ಕರಡಿ ಬಂದು ಹಿಡಿಯಲು ಹೆದರಿಕೊಂಡು ಅದರ ಎರಡೂ ಕಿವಿ ಹಿಡಿದುಕೊಂಡು ಜೋತಾಡಿದನು. ನೂರು ರೂಪಾಯಿ ನಾಣ್ಯ ಅದರ ಸರಪಣಿಯೊಂದಿಗೆ ಕೂಡಿ ನೆಲದಮೇಲೆ ಹರಡಿತು !

ಒಬ್ಬನು ಈತ ಕರಡಿಯ ಕಿವಿ ಹಿಡಿದು ಮೇಲಕ್ಕೂ ಕೆಳಕ್ಕೂ ಜೋತಾಡುವದನ್ನು ನೋಡಿ ವಿಚಾರಿಸಿದ. ಆಗ ಮೊಮ್ಮಗನು "ಅದು ನೂರು ರೂಪಾಯಿಗಳನ್ನು ಸಗಣಿಯೊಡನೆ ಪ್ರತಿ ರವಿವಾರದಿನ ಕೊಡುತ್ತದೆ !" ಎಂದನು. ಆಗ ಆತನು ತನ್ನ ಕುದುರೆಯನ್ನೂ ಆರುನೂರು ರೂಪಾಯಿಗಳನ್ನೂ ಕೊಟ್ಟು ನೂರು ರೂಪಾಯಿಗಳನ್ನು ಹೊರಗೆ ಹಾಕುವ ಕರಡಿಯನ್ನು ಕೊಂಡನು.

"ರವಿವಾರ ಕರಡಿ ನೂರು ರೂಪಾಯಿಗಳನ್ನು ಸಗಣಿ (ಲದ್ದಿ) ಹಾಕದಿದ್ದರೆ ಹುಲ್ಲುರಾಶಿಯನ್ನು ಹಾಕಿ ಬೆಂಕಿಕೊಟ್ಟರೆ

ಹಾಕುತ್ತದೆ" ಎಂದಿದ್ದನು ಪೆದ್ದುಮಗ! ಹಾಗೇ ಮಾಡಲು ಕರಡಿಯು ಸುಟ್ಟುಹೋಯಿತು!

"ಸಣ್ಣಕ್ಕಿಯ ಕತೆ"ಯಲ್ಲಿ ದುರಾಶೆಯ ಅಣ್ಣಂದಿರಿಗೆ ತಮ್ಮನು ಉಪಾಯದಿಂದ ಮಣ್ಣು ಮುಕ್ಕಿಸುವದು, ತುಂಬಾ ಮೋಜಿನದಾಗಿದೆ. ಅವನ ಭಾಗ್ಯಕ್ಕೆ ಅವರು ಮತ್ಸರಪಟ್ಟು ಕೊಂಡು ರಾತ್ರಿಯ ಹೊತ್ತಿನಲ್ಲಿ ಅವನ ಮನೆಯನ್ನು ಸುಟ್ಟು ಹಾಕುತ್ತಾರೆ. ಮರುದಿನ ಅದರ ಬೂದಿ ತುಂಬಿಕೊಂಡು ಬಡ ತಮ್ಮನು ಹೋಗಿ ಅಶ್ವತ್ಥ ಕಟ್ಟೆಯ ಮೇಲೆ ಕುಳಿತಿರುತ್ತಾನೆ. ತೆರಿಗೆ ವಸೂಲಾದ ಹಣವನ್ನು ಚೀಲಗಳಲ್ಲಿ ಹಾಕಿಕೊಂಡು ಅದೇ ಕಟ್ಟೆಯ ಮೇಲೆ ಇಟ್ಟುಕೊಂಡಿದ್ದರು. ಸರಕಾರೀ ಸಿಪಾಯಿಗಳು. ಹೋಗುವಾಗ ನಾಣ್ಯದ ಚೀಲವನ್ನು ಬಿಟ್ಟು ಬೂದಿಯ ಚೀಲವನ್ನು ಕಚೇರಿಗೊಯ್ಯುತ್ತಾರೆ. ಬಡ ತಮ್ಮನು ನಾಣ್ಯದ ಚೀಲವನ್ನು ಹೊತ್ತು ಮನೆಗೆ ಬರುತ್ತಾನೆ.

ಅವನ ಅಣ್ಣಂದಿರೂ ತಮ್ಮ ದೊಡ್ಡ ಮನೆಗಳಿಗೆ ಬೆಂಕಿ ಹಾಕಿ ಕೊಂಡು ಎರಡು ಚೀಲಗಳಲ್ಲಿ ತುಂಬಿಕೊಂಡು "ಬೂದಿ ಬೇಕೇನ್ರೋ ಬೂದಿ?" ಎಂದು ಕೇಳುತ್ತ ಪೇಟೆಗೆ ಒಯ್ಯುತ್ತಾರೆ! "ಇಲ್ಲೇಕೆ ಬೂದಿ? ಗದ್ದೆಗೆ ತಕ್ಕೊಂಡು ಹೋಗಿ ಹಾಕಿ" ಎಂದು ಪೇಟೆಯವರು ಹೇಳುತ್ತಾರೆ. ತಮ್ಮನ ಎತ್ತನ್ನು ಕೊಂದರು ಸಿಟ್ಟಿನಿಂದ. ಅದರ ಚರ್ಮ ಹೊತ್ತ ತಮ್ಮಗೆ ಮತ್ತೊಮ್ಮೆಯೂ ಹೀಗೆ ಕಳ್ಳರು ಕದ್ದ ಬಂಗಾರ ಸಿಗುತ್ತದ! ತಮ್ಮ ಕೋಣಗಳನ್ನು ತಾವೇ ಕೊಂದು ಅವುಗಳ ಚರ್ಮ ಒಣಗಿಸಿ ಚೀಲಗಳಲ್ಲಿ ತುಂಬಿಕೊಂಡು ಪೇಟೆಗೆ ಹೋಗಿ "ಕೋಣನ ಚರ್ಮ ಬೇಕೇನ್ರೀ, ಚರ್ಮ?" ಎಂದು ಕೂಗುತ್ತ

ತಿರುಗುತ್ತಾರೆ. "ಚಮಗಾರರ ಹತ್ತಿರ ತೆಗೆದುಕೊಂಡು ಹೋಗಿ!" ಎನ್ನಲು ಚಮಗಾರರ ಹತ್ತಿರ ಒಯ್ದರು. ಅವರು ಒಂದು ರೂಪಾಯಿ ಕೊಟ್ಟರು! ಹೀಗೆ ಅಣ್ಣಂದಿರು ಬಂಗಾರದ ಆಸೆಗೆ ಕೋಣಗಳನ್ನು ಕಳಕೊಂಡರು.

ತಮ್ಮನ ಮದುವೆ ಮಾಡುವೆವೆಂದು ಅವನನ್ನು ಬೆತ್ತದ ಪೆಟ್ಟಿಗೆಯಲ್ಲಿ ತುಂಬಿ ತೆಗೆದುಕೊಂಡು ಹೋಗಿ ಹೊಳೆಯಲ್ಲಿ ಮುಳುಗಿಸಲು ಒಯ್ಯುತ್ತಾರೆ. ದಾರಿಯಲ್ಲೊಂದು ಕಡೆ ಇಟ್ಟು ಹೋಗಿರುತ್ತಾರೆ. ಒಬ್ಬ ದನಕಾಯುವವನು ಈತನು "ತನಗೆ ಮದುವೆ ಬೇಡ" ಎನ್ನುತ್ತಿದ್ದುದನ್ನು ಕೇಳಿ ಬೆತ್ತದ ಪೆಟ್ಟಿಗೆಯ ಬಾಗಿಲು ತೆರೆದು ಅದರಲ್ಲಿ ತಾನು ಕುಳಿತು ನನಗೆ ಮದುವೆಯಾಗಬೇಕು ಎಂಬ ಆಸೆಯಿಂದ ಕುಳಿತುಕೊಳ್ಳುತ್ತಾನೆ. ತಮ್ಮನು ಅವನ ದನ ಹೊಡೆದುಕೊಂಡು ಮನೆಗೆ ಹೋದನು. ಇತ್ತ ದನಕಾಯುವವನನ್ನು ಹೊಳೆಯಲ್ಲಿ ಮುಳುಗಿಸಿದರು ಅಣ್ಣಂದಿರು. ಮುಂದೆಯೂ ತಮ್ಮ ದುರಾಸೆಯಿಂದಲೂ ತಮ್ಮನ ಯುಕ್ತಿಯಿಂದಲೂ ಅವರು ತಮ್ಮನ ಬದಲು ತಾವೇ ಸಾಯುತ್ತಾರೆ.

ಮತ್ತೊಂದು ಕಥೆಯು ಮಾಟದ ವಸ್ತುಗಳ ಬಳಕೆಯಿಂದ ಹಾಸ್ಯವನ್ನು ಸ್ವಾರಸ್ಯವಾಗಿ ಮೂಡಿಸಿದೆ. ಅಕ್ಷಯನಿಧಿಯನ್ನು ಕೊಡುವ ಮಂತ್ರದ ಸಂಚಿಯ ಸುಳಿವನ್ನು ತಿಳಿದು ರಾಜಕುಮಾರಿಯು ಭಟ್ಟನ ಮಗನನ್ನು ವಂಚಿಸಿ ಅವನನ್ನು ಕಷ್ಟದಲ್ಲಿ ಬೀಳಿಸುತ್ತಾಳೆ. ಅಡವಿಯಲ್ಲಿ ಅವನನ್ನು ಬಿಟ್ಟು ಮಂತ್ರದ ಜಮಖಾನ ಹತ್ತಿ ರಾಜ್ಯಕ್ಕೆ ಬರುತ್ತಾಳೆ ಅವಳು. ಅವರು ಮಾಟದ ಬಾಳೇಹಣ್ಣು ತಿಂದು ಕೋಡುಗಳು ಮೂಡುತ್ತವೆ!

ಕೋಡುಗಳು ಜಾಜಿಹೂವಿನ ರಸದಿಂದ ಕತ್ತರಿಸಿ ಬೀಳುತ್ತವೆ! ಅವನು ಅಲ್ಲಿಂದ ಹಕ್ಕಿಯಾಗಿ ಹಾರಿ ಬಂದು ಬಾಳೆಹಣ್ಣಿನ ಅಂಗಡಿ ತೆರೆಯುತ್ತಾನೆ, ರಾಜಕುಮಾರಿಯು ಅವನ್ನು ತರಿಸಿ ತಿನ್ನಲು ಬಾಳೆಹಣ್ಣಿಗೆ ಒಂದರಂತೆ ಅವಳಿಗೆ ಕೋಡು ಮೂಡು ತ್ತವೆ! ರಾಜನಿಗೂ ರಾಣಿಯರಿಗೂ ಬಾಳೇಹಣ್ಣು ತಿಂದುದರ ಕಾರಣವಾಗಿ ಕೋಡುಗಳು ಮೂಡುತ್ತವೆ! ಆಗ ವೈದ್ಯನಾಗಿ ಭಟ್ಟಮಾಣಿಯು ಬಂದು ಅವನ್ನು ನಿವಾರಿಸಿ ಅರ್ಧ ರಾಜ್ಯ ವನ್ನು ಪಡೆಯುವದಲ್ಲದೆ ರಾಜಕುಮಾರಿಯನ್ನೂ ಲಗ್ನವಾಗು ತ್ತಾನೆ.

ಹೀಗೆ ಸ್ವಾರಸ್ಯವಾದ ಕಥೆಗಳು ಒಳ್ಳೆ ನಾಟಕೀಯವಾದ ರೀತಿಯಲ್ಲಿ ಬೆಳೆದುಬಂದಿರುತ್ತವೆ. ಇಂಥ ಇಪ್ಪತ್ತು ಕಥೆಗಳನ್ನು ಪ್ರಕೃತ ಲೇಖಕನು ಸಂಗ್ರಹಿಸಿಯಾಗಿದೆ. ಇಂಥ ಕೆಲಸವು ಕನ್ನಡನಾಡಿನಲ್ಲೆಲ್ಲ ಇಂದು ನಡೆಯಬೇಕಾಗಿದೆ. ಜಾನಪದ ಕಥೆ ಗಳನ್ನು ಈಗಲೇ ಸಂಕಲನ ಮಾಡದಿದ್ದರೆ ಬೇರೆ ಸಾಹಿತ್ಯದ ಪ್ರಭಾವದಿಂದಾಗಿ ಈ ಅಮೂಲ್ಯ ಸಾಹಿತ್ಯವು ಹಿಂದೆ ಬಿದ್ದು ಕ್ರಮೇಣ ಮರೆಯಾಗಿ ಹೋಗುವದು.

ಗುಡೇ ಅಂಗಡಿಯೆಂಬ ಊರಿನಲ್ಲಿ ದಿ.ಮಹಾದೇವ ಅನಂತ ಭಟ್ಟ ಎಂಬವರು ಜಾನಪದ ಕಥೆಗಳನ್ನು ಸ್ವಾರಸ್ಯವಾಗಿ ಹೇಳುತ್ತಿದ್ದರು. ಅವರು ಎಂಬತ್ತೆರಡು ವರ್ಷ ವಯಸ್ಸಾಗಿ ಕೆಲವು ವರ್ಷಗಳ ಹಿಂದೆ ಕೈಲಾಸವಾಸಿಗಳಾದರು. ಅವರು ಹೇಳುತ್ತಿದ್ದ ಕಥೆಗಳಲ್ಲಿ ಕೇವಲ ಆರು ಕಥೆಗಳು ಸಂಕ್ಷಿಪ್ತರೂಪ ದಿಂದ ಬರೆದುಕೊಂಡುವು ನನ್ನ ಹತ್ತಿರ ಇವೆ. ಹೀಗೆ ಎಷ್ಟು ಕಥೆಗಳು ನಷ್ಟವಾಗಿರುವವೋ ಏನೋ. ಶ್ರೀ ಎಚ್. ಎಲ್.

ನಾಗೇಗೌಡರು "ಹಾಡುವ ತಾಯಂದಿರು ಕಣ್ಮರೆಯಾದರೆ ಜನಪದ ಸಾಹಿತ್ಯವೂ ಕಣ್ಮರೆಯಾದಂತೆ" ಎಂದು ಹೇಳಿದ ಮಾತು ಜಾನಪದ ಕಥೆಗಳ ವಿಷಯದಲ್ಲಿಯೂ ಅಷ್ಟೇ ಸತ್ಯವಾಗಿದೆ.

ಜಾನಪದ ಕಥೆಗಳನ್ನು ಸಂಗ್ರಹಿಸಿದರೂ ಅವನ್ನು ಪ್ರಕಟಿಸಲು ಪ್ರಕಾಶಕರಾಗಲಿ ಸರಕಾರದವರಾಗಲಿ ಸಹಾಯವನ್ನು ಸಲ್ಲಿಸದಿದ್ದರೆ ಸಂಗ್ರಹಿಸಿದವರಲ್ಲಿ ಬಹಳ ಜನರಿಗೆ ತಾವಾಗಿ ಅವನ್ನು ಪ್ರಕಟಿಸುವ ಆರ್ಥಿಕ ಅನುಕೂಲಗಳಿರುವದಿಲ್ಲ. ಪ್ರಕಟಿಸಿದರೂ ಖರ್ಚು ಮಾಡಿದ ಹಣವು ಮರಳಿ ಬರುತ್ತದೆಂದು ಹೇಳಲಿಕ್ಕಾಗದು. ಕುಮಟಾದ ಶ್ರೀ ಜಿ. ಆರ್. ಹೆಗಡೆ ಎಂಬ ಸಾಹಿತಿಗಳು ಸಾವಿರಾರು ಜಾನಪದ ಗೀತೆಗಳನ್ನೂ ನೂರಾರು ಜಾನಪದ ಕಥೆಗಳನ್ನೂ ಸಂಗ್ರಹಿಸಿರುವರು. ಆ ಸಾಹಿತ್ಯರಾಶಿಯಲ್ಲಿ ಬಹಳಷ್ಟು ಭಾಗವು ಪ್ರಕಟವಾಗಿಯೆ ಇಲ್ಲ. ಕಥೆಗಳಲ್ಲಿ "ಲೋಕಪ್ರಿಯ ಕಥೆಗಳು" ಎಂಬ ಪುಟ್ಟ ಪುಸ್ತಕವು ಪ್ರಕಟವಾಗಿದ್ದು ಅದರಲ್ಲಿನ ಏಳು ಕಥೆಗಳಲ್ಲಿ ಒಂದೊಂದೂ ಪುಟ್ಟ ಪುಟಾಣಿ ಮುತ್ತಿನಂತಿದೆ.

"ಕುಂಬಾರನ ಅಳಿಯ" ಎಂಬ ಕಥೆಯಲ್ಲಿ ಒಬ್ಬ ಕುಂಬಾರನ ಜಾಣಮಗಳು ಮದುವೆಯಾಗುವ ಮುನ್ನ ವರನ ಬುದ್ಧಿವಂತಿಕೆಯ ಪರೀಕ್ಷೆ ಮಾಡುತ್ತಾಳೆ. ಅವಳ ಪ್ರಶ್ನೆ ಹೀಗಿದೆ "ಒಂದು ತಂಬಿಗೆ ನೀರು ಹಿಡಿಯುವ ಪಾತ್ರೆ ಮಾಡಬೇಕಾಗಿದೆ. ಅದಕ್ಕಾಗಿ ತೀರ ಕಡಿಮೆಯೆಂದರೆ ಎಷ್ಟು ಸಾಮಾನ ಉಪಯೋಗಿಸುವಿರಿ ? " ಎಲ್ಲರೂ ಪಾತ್ರೆ ಮಾಡುವ ಸಲಕರಣೆಗಳ ಹೆಸರು ಹೇಳಿದರು. ಒಬ್ಬನು ಮಾತ್ರ "ಒಂದು ಬೊಗಸೆ ಬೆಸಕನ ಮಣ್ಣು ! ಒಂದು ತಂಬಿಗೆ ನೀರು" ಎಂದು ಹೇಳಿದನು. ಹಾಗೆ

ತನ್ನ ಕೈಯಿಂದಲೆ ಅಷ್ಟರಿಂದಲೆ ಪಾತ್ರೆ ಮಾಡಿಯೂ ತೋರಿ
ಸಿದನು. ಆದಷ್ಟು ತೀರ ಕಡಿಮೆ ಸಾಮಾನುಗಳಿಂದಲೇ ಕೆಲಸ
ನಡೆಸುವವನು ಬುದ್ಧಿವಂತ'' ಎಂದು ಅವಳು ಅವನನ್ನ
ಮದುವೆಯಾದಳು. "ಕಾಣದ ಕೈ" ಎಂಬ ಕಥೆಯಲ್ಲಿ ಸೂರಪ್ಪ
ಎಂಬ ಒಕ್ಕಲಿಗನಿಗೆ ಬೆಳೆ ತೆಗೆಯಲು ಸಹಾಯ ಮಾಡಿದ
ಕೈಯೇ ಅವನನ್ನು ಹೇಗೆ ನಾಶ ಮಾಡಿತು ಎಂಬುದು ಬಹಳ
ಮಾರ್ಮಿಕವಾಗಿ ಬಂದಿದೆ. ಕರ್ತವ್ಯದ ಅರಿವಿಲ್ಲದೆ ಅರಿವುಗೇಡಿ
ಯಾದರೆ ಅದೇ ಕೈ ನಾಶಮಾಡುವದಕ್ಕೂ ಮುಂದಾಗುತ್ತದ.
"ಸೊಂದೇರಾಯರ ದಂಡು ಬಂದಾಗ" ಎಂಬ ಕಥೆಯಲ್ಲಿ ರಾಮ
ನಾಯಕನಂಥ ಹೇಡಿಗಳು ಹೆದರಿಕೊಂಡು ಮೈಗೆಲ್ಲ ಬೆಲ್ಲವನ್ನೂ
ಕೆಸರನ್ನೂ ಬಳಿದುಕೊಂಡು ಕೇದಿಗೆಯ ಹಿಂಡಿನಲ್ಲಿ ಬೆನ್ನು
ಮೇಲಾಗಿ ಬಿದ್ದುಕೊಂಡರು. ವೈರಿಗಳ ಸೈನಿಕರು ಇವರು ಹೆಣ
ವಿರಬೇಕೆಂದು ಮುಂದೆ ಹೋದರು! ಇಂಥ ಸ್ವಾರಸ್ಯವಾದ
ಕನ್ನಡದ ಸ್ವತಂತ್ರ ಜಾನಪದ ಕಥೆಗಳ ಸಂಕಲನ ಮಾಡಿ
ಅವುಗಳನ್ನು ಬೆಳಕಿಗೆ ತರುವದು ಅವಶ್ಯವಿದೆ. " ಮುಂದೆ
ಹಣ ಕೊಟ್ಟರೆ ಏನಾದರೂ ಸಿಕ್ಕಬಹುದು. ಆದರೆ ಜನಪದ
ಸಾಹಿತ್ಯ ಸಿಕ್ಕುವದಿಲ್ಲ. ಶರಾವತಿಯನ್ನು ಈಗ ಉಪಯೋಗಿಸಿ
ಕೊಳ್ಳದಿದ್ದರೆ ಮುಂದೆ ಉಪಯೋಗಿಸಿಕೊಳ್ಳಬಹುದು. ಆದರೆ
ಜನಪದ ಸಾಹಿತ್ಯ ಶರಾವತಿ ಒಮ್ಮೆ ಬತ್ತಿದರೆ ಮತ್ತೊಮ್ಮೆ
ಹರಿಯಲಾರಳು. ಬೇರೊಂದು ಸಾಹಿತ್ಯನದಿ ಹುಟ್ಟಬಹುದು.
ಆದರೆ ಜನಮನದಲ್ಲಿ ಮೂಡಿ ಬಂದ ಜನಪದ ಸಾಹಿತ್ಯ
ಶರಾವತಿಯು ಒಮ್ಮೆ ಬತ್ತಿದರೆ ಮತ್ತೊಮ್ಮೆ ಹರಿಯಲಾರಳು"
ಎಂದು ಶ್ರೀ ಎಚ್. ಎಲ್. ನಾಗೇಗೌಡರು " ದೇಶ

ವಿದೇಶದ ಜನಪದ ಕಥೆಗಳು" ಗ್ರಂಥದ ಮುನ್ನುಡಿಯಲ್ಲಿ ಹೇಳಿದ್ದಾರೆ.

ಇಂದು ಜನತೆಯ ನಂಬಿಕೆಗಳು, ಆಸೆ ಆಕಾಂಕ್ಷೆಗಳು ಲೋಪದೋಷಗಳು, ಸುಖದುಃಖಗಳು ಇವನ್ನು ಎಂದಿಗಿಂತಲೂ ಹೆಚ್ಚು ಸಹಾನುಭೂತಿಯಿಂದ ನೋಡಿ ಅವರ ಬಾಳನ್ನು ಉತ್ತಮಗೊಳಿಸಲು ಪ್ರಯತ್ನಗಳು ನಡೆಯುತ್ತಿವೆ. ಶ್ರೀ ಕುವೆಂಪು ಅವರು ಬರೆದಿರುವಂತೆ "ಸಾಮಾನ್ಯತಾ ಶ್ರೀ"ಯು ಇಂದು ಆರಾಧ್ಯವಾಗಿದೆ. ಮಾನವಶಾಸ್ತ್ರದ ಅಭ್ಯಾಸಿಗಳು ಜನಜೀವನದ ರೀತಿ ನೀತಿಗಳನ್ನು ಕೂಲಂಕಷವಾಗಿ ಪರಿಶೀಲಿಸಿ ತೀರ ಪ್ರಾಕೃತ ಮಾನವನಲ್ಲಿಯೂ ಮಿಡಿಯುವ ಭಾವನೆಗಳ ತಂತಿಗಳನ್ನು ಕಂಡುಹಿಡಿದಿರುವರು. ಜನರ ವೃತ್ತಿ-ಪ್ರವೃತ್ತಿಗಳು, ರೀತಿ-ನೀತಿಗಳು ಅವರ ಕಥೆಗಳಲ್ಲಿಯೂ ಹಾಡುಗಳಲ್ಲಿಯೂ ಅವರ ಜೀವನದ ರಕ್ತನಾಡಿಗಳ ಚಲನೆಯ ಮಿಡಿತವನ್ನು ನುಡಿಸುತ್ತವೆ.

ನಮ್ಮ ಜನಪದ ಗೀತಗಳ ಸಂಪತ್ತು ಎಷ್ಟು ಮಿಗಿಲಾದುದು ಎಂಬುದನ್ನು ನಾವು ಇಂದು ಕೆಲವು ಮಹನೀಯರ ಪ್ರಯತ್ನದಿಂದ ಅರಿತುಕೊಂಡಿರುತ್ತೇವೆ. ಆ ಕೆಲಸವು ನಮ್ಮ ಜಾನಪದ ಕಥೆಗಳ ವಿಷಯದಲ್ಲಿಯೂ ಆಗಬೇಕಾಗಿದೆ.

ಪ್ರಾಚೀನ ಕಾಲದಿಂದಲೂ ನಮ್ಮ ಕನ್ನಡ ಸಾಹಿತ್ಯದಲ್ಲಿ ಕವಿಗಳು ಹೆಚ್ಚಾಗಿ ಬೇರೆ ಭಾಷೆಯ ಸಾಹಿತ್ಯಗಳ ಕಥಾವಸ್ತುಗಳನ್ನು ತೆಗೆದುಕೊಂಡು ಕೃತಿರಚನೆ ಮಾಡುತ್ತಿದ್ದರು. ವೀರಶೈವ ಕವಿಗಳು ಸ್ವತಂತ್ರ ವಸ್ತುಗಳನ್ನು ತೆಗೆದುಕೊಂಡು ವಸ್ತುವಿನಲ್ಲಿ ಸ್ವಂತಿಕೆಯ ಪ್ರಚಾರವನ್ನು ಹೆಚ್ಚಾಗಿ ಮಾಡಿದರು.

ನಮ್ಮಲ್ಲಿ ಇಂದು ಇತರ ಬಗೆಯ ಸಾಹಿತ್ಯಗಳಲ್ಲೆಲ್ಲ ಸ್ವತಂತ್ರ ಕೃತಿಗಳು ಹೆಚ್ಚು ಹೆಚ್ಚಾಗಿ ನಿರ್ಮಾಣವಾಗಿವೆ, ಆಗುತ್ತಲಿವೆ. ಆದರೆ ಜಾನಪದ ಕಥಾಸಾಹಿತ್ಯದಲ್ಲಿ ಮಾತ್ರ ಅನುವಾದ ಗ್ರಂಥಗಳೇ ಹೆಚ್ಚಾಗಿ ಕಂಡುಬರುತ್ತವೆ. ಈ ಪರಿಸ್ಥಿತಿಯು ಹೋಗಬೇಕು. ಕನ್ನಡನಾಡಿನಲ್ಲಿಯೇ ವಿಶಿಷ್ಟವಾದ ಜಾನಪದ ಕಥೆಗಳು ಈಗಾಗಲೇ ಬಹಳ ಉಂಟು. ಅವುಗಳನ್ನು ಸಂಕಲನ ಮಾಡಿ ಬೆಳಕಿಗೆ ತರಬೇಕಾಗಿದೆ. "ಜಾನಪದ ಕಥೆ"ಗಳ ಕುರಿತಾದ ಈ ಅಭ್ಯಾಸವು ಆ ಕಾರ್ಯದ ಅಗತ್ಯವನ್ನು ಅಭ್ಯಾಸಿಗಳ ಮುಂದೆ ಇಟ್ಟಿರುತ್ತದೆ. ಜನತಾ ಜನಾರ್ದನನ ವಿಶ್ವರೂಪ ದರ್ಶನವು ನಮ್ಮ ಜಾನಪದ ಕಥೆಗಳಿಂದ ಸಮರ್ಪಕವಾಗಿ ಆಗಬಲ್ಲುದು. ಆ ರೀತಿಯ ಜಾನಪದ ಕಥೆಗಳ ಸಂಕಲನಗಳಿಂದ ನಾಡಿನ ಜನರ ಸಂತೋಷವು ಅಧಿಕವಾಗುತ್ತದೆ. ವಿಶ್ವದ ಇತರ ನಾಡುಗಳ ಜನರೂ ಕನ್ನಡನಾಡಿನ ಜಾನಪದ ಕಥೆಗಳ ಸೊಗಸನ್ನು ಆಸ್ವಾದಿಸುವ ಕಾಲವು ಖಂಡಿತವಾಗಿಯೂ ಬರಲಿದೆ. ಅಂಥ ಸಂತೋಷವು ಎಲ್ಲರಿಗೂ ಉಂಟಾಗಲಿ !

ಸಂತೋಷಂ ಜನಯೇತ್ ಪ್ರಾಜ್ಞಃ ತದೇವೇಶ್ವರಪೂಜನಂ

೨೬. ಜೀವನದಲ್ಲಿ ನಗೆ ( ,, ) –ಎಂ. ಎಸ್. ಸುಂಕಾಪುರ

೨೭. ಬಸವಣ್ಣನವರ ಯೋಜನೆಗಳು ( ,, ) –ಬಿ. ಸಿ. ಜವಳಿ

೨೮. ೧೮೫೭ರ ಕ್ರಾಂತಿ ( ,, ) –ಸಿ. ವೀರಬಸಣ್ಣ

೨೯. ಕನ್ನಡ ಕಥಾಸೃಷ್ಟಿ –ಬಿ. ಬಿ. ಮಹೀಶವಾಡಿ

೩೦. ಸಂಸ್ಕೃತ ಸಾಹಿತ್ಯದಲ್ಲಿ ಶೃಂಗಾರರಸ –ಕೆ. ಕೃಷ್ಣಮೂರ್ತಿ

೩೧. ನೀರಾವರಿ ಬೇಸಾಯ –ಎಸ್. ಎ. ಹೊಸಮನಿ

೩೨. ಸಾರ್ವಜನಿಕ ಅಭಿಪ್ರಾಯ –ಎನ್. ರಾಜಗೋಪಾಲರಾವ್

೩೩. ಕನ್ನಡ ಕಾವ್ಯಗಳಲ್ಲಿ ಕಿರಾತಾರ್ಜುನ ಪ್ರಸಂಗ
–ದೇವೇಂದ್ರಕುಮಾರ ಹಕಾರಿ

೩೪. ಕನ್ನಡಕ್ಕೆ ಪುರಂದರದಾಸರು ನೀಡಿದ ಕೊಡುಗೆ
–ಜಿ. ಡಿ. ನಾಡಕರ್ಣಿ

೩೫. ಫ್ಯಾಶನ್ನುಗಳು (ದ್ವಿ. ಆ.) –ಕೆ. ಡಿ. ತಂಗೋಡ

೩೬. ಮಹಾಕವಿ ರಾಘವಾಂಕನ ಪಾತ್ರಗಳಲ್ಲಿ ತತ್ವನಿಷ್ಠೆ
- ಬಿ. ವ್ಹಿ. ಮಲ್ಲಾಪುರ

೩೭. ಅಭಿವೃದ್ಧಿ ಯೋಜನೆಗಳಲ್ಲಿ ಸಹಕಾರದ ಪಾತ್ರ
–ಎಸ್. ಜಿ. ಕರಭಂಟನಾಳ

೩೮. ಕನ್ನಡ ಜೈನ ಪುರಾಣಗಳು –ಎಸ್. ಎನ್. ನಾಯಕ

೩೯. ಕನ್ನಡ ನಾಟ್ಯಸೃಷ್ಟಿ –ಎಚ್. ಜಿ. ಲೋಕೂರ

೪೦. ಹರಿಹರನು ಚಿತ್ರಿಸಿದ ಶಿವಶರಣೆಯರು –ಬಿ. ಬಿ. ಪೆಂಡಿ

೪೧. ನೀವು ಬಯಸುವ ಮಗು ಗಂಡೊ ? ಹೆಣ್ಣೊ ?
–ಕೆ. ಆರ್. ರಾಮಸ್ವಾಮಿ

೪೨. ಅಂಡಯ್ಯ –ಬಿ. ಎಸ್. ಕುಲಕರ್ಣಿ

೪೩. ಬೆಳವಲನಾಡಿನ ಬೆಳೆಗಳು –ಎಸ್. ಎ. ಹೊಸಮನಿ

೪೪. ಜಾನಪದ ಕಥೆಗಳು (ದ್ವಿ. ಆ.) –ಎಲ್. ಆರ್. ಹೆಗಡೆ

೪೫. ಸುಧಾರಿಸಿದ ಬೇಸಾಯ –ಎ. ಸಿ. ಕಲ್ಯಾಣಿಮಠ

೪೬. ಕನ್ನಡನಾಡಿನ ಐತಿಹಾಸಿಕ ಮಹಾಪುರುಷರು
–ಬಿ. ಆರ್. ಗೋಪಾಲ

೪೭. ಗ್ರಂಥಾಲಯದ ಅಂತರಂಗ –ಎಸ್. ಆರ್. ಗುಂಜಾಳ

೪೮. ಸ್ತ್ರೀ ಮತ್ತು ಶಿಕ್ಷಣ –ವನಮಾಲಾ ಆಚಾರ್

೪೯. ಜಾಗತಿಕ ಸರಕಾರ –ಸಿ. ವೀರಬಸಣ್ಣ

೫೦. ಸಮುದಾಯ ಸಂಘಟನೆ –ಎಚ್. ಎಂ. ಮರುಳಸಿದ್ಧಯ್ಯ

೫೧. ಅಶೋಕನ ಧರ್ಮಶಾಸನಗಳು —ಶ್ರೀನಿವಾಸ ರಿತ್ತಿ

೫೨. ಪ್ರಾಚೀನ ಭಾರತದ ರಾಜ್ಯಪದ್ಧತಿ (ದ್ವಿ. ಆ.) —ಸಿ. ವ್ಹಿ. ರಂಗಸ್ವಾಮಿ

೫೩. ಅಕ್ಕಮಹಾದೇವಿ ಮತ್ತು ಮೀರಾಬಾಯಿ —ಎಸ್. ಎಸ್. ಕಬ್ಬಿನ

೫೪. ಕನ್ನ ಕಾವ್ಯದಲ್ಲಿ ವೀರರಸ ನಿರೂಪಣೆ —ಬಿ. ಬಿ. ಮಹೀಶವಾಡಿ

೫೫. ಹರಿಹರ ಮಹಾಕವಿಯ ಕೆಲವು ಮಹೋನ್ನತ ವಿಚಾರಗಳು —ಬಿ. ಸಿ. ಜವಳಿ

೫೬. ಭಾರತ ರಾಜ್ಯಘಟನೆ —ಎಂ. ಎಸ್. ಪಾಟೀಲ

೫೭. ಪಂಚಾಯತಿ ರಾಜ್ಯ —ಎಸ್. ಜಿ. ಕರಭಂಟನಾಳ ಮತ್ತು —ಕೆ. ಡಿ. ಬಸವ

೫೮. ವಿಷಮಜ್ವರ —ಪಿ. ಎಸ್. ಶಂಕರ

೫೯. ಪುಸ್ತಕ ಭಾಂಡಾರ ಕಾಯದೆ —ಜಿ. ಎಂ. ಪಾಟೀಲ

೬೦. ಸರ್ ಐಸಾಕ್ ನ್ಯೂಟನ್ —ಆರ್. ವ್ಹಿ. ಅಬ್ಬಿಗೇರಿ

೬೧. ಗ್ರಾಮಾಭ್ಯುದಯದ ಯೋಜನಾಂಗಗಳು —ಟಿ. ಕೆ. ಮೇಟಿ

೬೨. ಹರಿಜನರ ಸಮಸ್ಯೆಗಳು ಹಾಗು ಅವುಗಳ ಪರಿಹಾರ —ಎನ್. ಕೆ. ಕಡೆತೋಟದ

೬೩. ರಾಸಾಯನಿಕ ಕಿಣ್ವಗಳು —ಎಂ. ಎಸ್. ಎಸ್. ರಾವ್

೬೪. ಪ್ರಜಾಪ್ರಭುತ್ವದ ಮೂಲತತ್ವಗಳು —ಕೆ. ಬಿ. ಬಕ್ಕಪ್ಪ

೬೫. ಹೃದಯಾಘಾತ — ಪಿ. ಎಸ್. ಶಂಕರ್

೬೬. ಆಭರಣಗಳ ಬಗೆಗೆ ಸಾಮಾಜಿಕ ದೃಷ್ಟಿಕೋನ —ಡಿ. ಎ. ಚಿಕ್ಕಿ

೬೭. ಶ್ರೀ ರಾಮಾಯಣ ದರ್ಶನದಲ್ಲಿ ಕುವೆಂಪು ಸೃಜಿಸಿದ ಮೂರು ಪಾತ್ರಗಳು —ಎಂ. ಜಿ. ಬಿರಾದಾರ

೬೮. ಯೋಜನೆಗಳೇಕೆ ಬೇಕು ? —ಎಸ್. ಎಸ್. ಯಮ್ಮಿ

೬೯. ಸಗರನಾಡಿನ ಶಿವಶರಣರು —ವ್ಹಿ. ಶಿವಾನಂದ

೭೦. ವಿಜ್ಞಾನದ ದೃಷ್ಟಿಯಲ್ಲಿ ಸೃಷ್ಟಿ —ಆರ್. ಎಸ್. ಭೂಸನೂರಮಠ

೭೧. ವಿಜಯನಗರದ ನಿರ್ಣಾಯಕ ಯುದ್ಧ —ಎಸ್. ಬಿ. ಕೋಡದ

೭೨. ಬಸವಣ್ಣನವರನ್ನು ಕುರಿತ ಶಾಸನಗಳು —ಎಂ. ಎಂ. ಕಲಬುರ್ಗಿ

೭೩. ಆಧುನಿಕ ಭಾಷಾ ವಿಜ್ಞಾನ —ಜಿ. ಎಸ್. ಕುಳ್ಳಿ

ಬೆಲೆ ಪ್ರತಿ ಒಂದಕ್ಕೆ ೨೫ ಪೈಸೆ